A·41

॥ ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು. ॥

# ಬಸವಧ್ವಾಂತ ದಿವಾಕರ.

ಲೇಖಕ, ಮತ್ತು ಪ್ರಕಾಶಕ.

ಪಂಡಿತ ಶ್ರೀ ಗುರುಸಿದ್ಧ ಶಾಸ್ತ್ರೀ ಉಜ್ಜಯಿನೀ.

C. M. V. Sharma Nalagunday

ಗದಗ

ಸೈಮನ್ ಪ್ರಿಂಟೀಂಗ್ ವರ್ಕ್ಸಿನಲ್ಲಿ ಮುದ್ರಿಸಲ್ಪಟ್ಟಿತು.

1923.

ಕ್ರಯ ೦—೧೦—೦ ] [ Price 0—10—0

## ಶ್ರೀಜಗದ್ಗುರು ಪಂಚಾಚಾರ್ಯೇಭ್ಯೋನಮಃ

# "ಪ್ರಸ್ತಾವನೆಯು,,

ವಾಚಕ ಮಹಾಶಯರೇ—ಈಗ ೨ ವರ್ಷಗಳ ಪೂರ್ವದಲ್ಲಿ ಮ|| ರಾ|| ಶಾಂತಪ್ಪ ಕುಬಸದ ಹನ್ಸಿಗಿ ಎಂಬವರು ಹುಬ್ಬಳ್ಳಿಯಲ್ಲಿರತಕ್ಕ ರಾ|| ಸಿದ್ಧರಾಮಪ್ಪಾ ದುಂಡಪ್ಪಾ ಪಾವಟೆ ಎಂಬವರಿಗೆ ೨೦೦ ಪ್ರಶ್ನಗಳನ್ನು ಕೇಳಿ ಆ ಪ್ರಶ್ನಗಳಿಂದ ಯುಕ್ತವಾದ ಗ್ರಂಥಕ್ಕೆ "ಬಸವಾದಿ ನಿಜತತ್ವದರ್ಪಣ,, ವೆಂಬ ಹೆಸರನ್ನಿಟ್ಟು ಪ್ರಸಿದ್ಧಮಾಡಿದರು. ಯಥಾರ್ಥ ತತ್ವಾತ್ಮಕ ಪ್ರಶ್ನಗಳಿಂದೊಡಗೂಡಿದ ಈ ಗ್ರಂಥವು ತನ್ನ ನಿಜಸ್ವರೂಪವನ್ನು ಇಡೀಜಗತ್ತಿಗೆ ತೋರಿಸಿ ಜಗನ್ಮಾನ್ಯವಾಯಿತು. ಲೋಕಮಾನ್ಯವಾದ ಈ ಗ್ರಂಥದಲ್ಲಿರತಕ್ಕ ಬಸವ ಹಾಗೂ ಚನ್ನಬಸವನ ಸಂಬಂಧಿ ಪ್ರಶ್ನಗಳಿಗೆ ಪಾವಟೆಯವರು ಹ್ಯಾಗೇ ಆಗಲಿ ಉತ್ತರವನ್ನು ಬರೆದೆವೆಂದು ಹೇಳಿಸಿಕೊಂಡು ಕೃತಾರ್ಥರಾದರು. ಅಲ್ಲಮನ ವಿಷಯದಲ್ಲಿರತಕ್ಕ ಪ್ರಶ್ನಗಳಿಗೆ ಇನ್ನೂ ವರಿಗೆ ಉತ್ತರವನ್ನು ಬರೆದಿಲ್ಲ; ಇರಲಿ; ಈ ಪಾವಟೆಯವರ ಉತ್ತರದ ಸರಣಿಯು ಲೋಕಕ್ಕೆಲ್ಲ ಆಶ್ಚರ್ಯವನ್ನುಂಟುಮಾಡತಕ್ಕದ್ದಾಗಿದೆ. ಯಾಕಂದರೆ—ಪ್ರಶ್ನಗಳಿಗೆ ಉತ್ತರಗಳನ್ನು ಬರೆಯತಕ್ಕವರು ಮೇಲೆ ಪ್ರಶ್ನಗಳನ್ನು ಬರೆದುಕೊಂಡು ಕೆಳಗೆ ಉತ್ತರಗಳನ್ನು ಬರೆಯಬೇಕಾಗುತ್ತದೆ. ಇದೇ ಉತ್ತರವನ್ನು ಬರೆಯುವ ಲಕ್ಷಣವು! ಈ ಮಹಾಶಯರು ಈ ಪ್ರಕಾರವಾಗಿ ಉತ್ತರಗಳನ್ನು ಬರೆಯದೆ ಸುಮ್ಮನೆ ಉದ್ದಕ್ಕೆ ಎತ್ತು ಉಚ್ಚಿ ಹೊಯ್ದುವಂತೆ ಬರೆದುಕೊಳ್ಳುತ್ತ ಹೋಗಿದ್ದಾರೆ. ಆದಾಗ್ಯೂ ಉತ್ತರಗಳಲ್ಲಿ ಬಸವಾದಿಗಳ ಸಿದ್ಧಾಂತವನ್ನು ಎಷ್ಟರಮಟ್ಟಿಗೆ ತೋರಿಸಿದ್ದಾರೆಯೋ ಏನೋ! ಆದರೆ ಕೇವಲ ಬೈಗಳ ಸಿದ್ಧಾಂತವನ್ನೇ ಮಾತ್ರ ವಿಶೇಷವಾಗಿ ತೋರಿಸಿದ್ದಾರೆ. ಇಂಥ ಲೋಕವಿಲಕ್ಷಣಗಳಾದ ಉತ್ತರಗಳನ್ನು ನೋಡಿ ಸಾರಾಸಾರ ವಿಚಾರಶೀಲರು ಸಿಳ್ಳಿಹೊಡೆದು ಹಿಗ್ಗುತ್ತಿರುವರು. ಈ ಮಹಾಶಯನಿಗೆ ಪರಮಾತ್ಮನು ಇದೇ ಬುದ್ಧಿಯನ್ನು ಅನುಗ್ರಹಿಸಲೆಂದೂ, ಇಂಥ ಮಂಗಲ ಬುದ್ಧಿಯಿಂದಲೇ ಈತನು ಲೋಕದಲ್ಲಿ ವಿಖ್ಯಾತಿಯನ್ನು ಹೊಂದಲೆಂದೂ ನಾನಾದರೂ ಹಾರೈಸುತ್ತೇನೆ. ಈತನು ಈ ಒಳಗಾಗಿ ಯಾವ ರೀತಿಯಿಂದೋ ಆಗಲಿ ಬರೆದ ಬಸವಭಾನು— ಚನ್ನಬಸವ ತೈಜಸಗಳೆಂಬ ಪುಸ್ತಕಗಳ ಖಂಡನವನ್ನು ಮಾಡಬಹುದಾಗಿತ್ತು: ಆದರೆ ಅಲ್ಲಮನ ವಿಷಯದಲ್ಲಿರತಕ್ಕ ಪ್ರಶ್ನಗಳಿಗೆ "ಅಲ್ಲಮವ್ಯೋಮ,, ಎಂಬ ಹೆಸರಿನ ಉತ್ತರರೂಪವಾದ ಪುಸ್ತಕವನ್ನು ಬರೆಯುತ್ತೇನೆಂದು ಪ್ರಸಿದ್ಧ ಮಾಡಿದ ಕಾರಣ

ಆ ಮೂರು ಪುಸ್ತಕಗಳಿಗೆ ಒಮ್ಮೆಲೆ ಖಂಡಸವನ್ನು ಮಾಡಬೇಕೆಂದು ಬಿಟ್ಟಿದ್ದಾಯಿತು. ಇಷ್ಟರಲ್ಲಿಯೇ ಬಸವಾದಿ ನಿಜತತ್ವ ದರ್ಪಣದಲ್ಲಿರತಕ್ಕ ಯಾವತ್ತು ಪ್ರಶ್ನಗಳಿಗೆ ಬಸವಾದಿ ಪ್ರಮಥ ತತ್ವ ನಿರ್ಣಯವೆಂಬ ಉತ್ತರರೂಪವಾದ ಮತ್ತೊಂದು ಪುಸ್ತಕವು ಆವಿರ್ಭವಿಸಿತು. ಅಸಾಧಾರಣ ಬುದ್ಧಿಶಾಲಿಗಳಾದ ಕೆಲವು ಮಹಾ ಪಂಡಿತರು ಬಾಗಲಕೋಟೆಯಲ್ಲಿ ಕೂಡಿ ಎರಡು ವರ್ಷಗಳ ವರೆಗೆ ಆಲೋಚನೆಮಾಡಿ ಉತ್ತರರೂಪವಾದ ಈಪುಸ್ತಕವನ್ನು ಬರೆದು ಅದನ್ನು ಬಸವರಾಜಶಾಸ್ತ್ರೀ ಮಾಗಳ ಎಂಬಾತನ ಹೆಸರಿನಿಂದ ಪ್ರಸಿದ್ಧ ಮಾಡಿರುತ್ತಾರೆ. ಈ ಉತ್ತರಗಳ ಸ್ವರೂಪವನ್ನು ನೋಡಿದರಂತೂ ಧರ್ಮಶಾಸ್ತ್ರಜ್ಞರು ಪ್ರತಿಯೊಂದು ಉತ್ತರ ಕ್ಕೊಂದೊಂದು ಯೋಗ್ಯ ಪದವಿಯನ್ನು ಕೊಡದೆ ಇರಲಾರರು. ಈಉತ್ತರಗಳು ಕೇವಲ ಅಸಂಬದ್ಧ ಪ್ರಲಾಪಗಳಿಂದ ಯುಕ್ತಗಳಾದಾಗ್ಯೂ—ನಾನು ಉತ್ತರವನ್ನು ಬರೆದೆನು. ನಾನು ಉತ್ತರವನ್ನು ಬರೆದೆನು—ನಾವು ಉತ್ತರವನ್ನು ಬರೆಯಿಸಿದೆವು, ನಾವು ಉತ್ತರವನ್ನು ಬರೆ ಯಿಸಿದೆವೆಂದು ಕೆಲವು ವಿಚಾರ ಶೂನ್ಯರು ಕುಣಿದಾಡಲಿಕ್ಕೆ ಹತ್ತಲಾಗಿ ಅವರ ಕುಣಿದಾ ಟವನ್ನು ತಡೆ ಮಾಡುವದಕ್ಕಾಗಿ ಹನ್ನೊಂದು ದಿವಸಗಳಲ್ಲಿಯೇ ಆ ಯಾವತ್ತು ಉತ್ತರಗಳ ವಿಮರ್ಶವನ್ನು ಮಾಡಿ ಪ್ರತಿಯೊಂದು ಉತ್ತರದಲ್ಲಿಯೂ ಅಸ್ವಾರಸವನ್ನು ತೋರಿಸಿ ಖಂಡ ನರೂಪವಾದ ಈ ಗ್ರಂಥವನ್ನು ಬರೆದು ಇದಕ್ಕೆ "**ಬಸವಧ್ವಾಂತ ದಿವಾಕರ**" ಎಂಬ ಹೆಸರನ್ನಿಟ್ಟು ಪ್ರಸಿದ್ಧಿಸೋಣವಾಯಿತು. **ಬಸವನೆಂಬ ಕಗ್ಗತ್ತಲೆಯು** ಯಾವತ್ತು ಶುದ್ಧ ಸಾಂಪ್ರದಾಯದ ವೀರಶೈವ ಜನಾಂಗದಮೇಲೂ ಹಾಗೂ ಪರಮ ಪವಿತ್ರ ವೀರ ಶೈವ ಧರ್ಮ ಶಾಸ್ತ್ರದ ಮೇಲೂ ಬಿದ್ದು ಆವರಿಸಿ ಸರ್ವವನ್ನು ಸ್ವಸ್ವರೂಪವನ್ನಾಗಿ ಮಾಡಿ ಕೊಂಡಿರುವ ಕಾರಣ **ಬಸವನೆಂಬೀ ಕಾರ್ಗತ್ತಲೆಯನ್ನು** ಹೋಗಲಾಡಿಸಿ ವೈದಿಕ ತತ್ವಗಳೆಂಬ ಸದ್ವಸ್ತುಗಳ ನಿಜ ಸ್ವರೂಪವನ್ನು ತೋರಿಸುವದಕ್ಕೋಸ್ಕರ ಈಗ್ರಂಥವು **ಸೂರ್ಯಸಂತಿರೋಣದಿಂದ** ಇದಕ್ಕೆ "**ಬಸವಧ್ವಾಂತ ದಿವಾಕರ**" ಎಂಬ ಹೆಸ ರನ್ನಿಟ್ಟು ಪ್ರಸಿದ್ಧಿಸೋಣವಾಗಿದೆ. ಆದ ಕಾರಣ ಇದರಲ್ಲಿರತಕ್ಕ ಯಾವತ್ತು ಯಥಾರ್ಥ ವಿಷಯಗಳನ್ನು ತಿಳಿದುಕೊಂಡು ಅದರಂತೆ ವರ್ತಿಸುವದು ಪ್ರತಿಯೊಬ್ಬ ಶುದ್ಧ ಸಾಂಪ್ರದಾ ಯದ ವೀರಶೈವನ ಆದ್ಯ ಕರ್ತವ್ಯವಾಗಿದೆ. ಬಸವನು ವೀರಶೈವ ಧರ್ಮವನ್ನು ಉದ್ಧರಿಸಿ ದನೆಂದು 'ಅವನ ವಿಷಯದಲ್ಲಿ ಕೆಲವರಿಗೆ ದೊಡ್ಡ ದೆವ್ವನು ಬಡಿದು ಕೊಂಡಿರುವದು. ಮಹಾಶಯರೇ—ಬಸವನು ಪರಮ ವೈದಿಕವಾದ ವೀರಶೈವ ಧರ್ಮವನ್ನು ಉದ್ಧರಿಸಿಲ್ಲ; ಅವನು ಪವಿತ್ರವಾದ ಆ ಧರ್ಮದಲ್ಲಿ ಅನೇಕ ಜಾತಿಗಳ ಸಾಂಕರ್ಯವನ್ನು ಮಾಡಿ ಅದನ್ನು ಕೆಡಿಸಿ ಹೋದನು. ಈರೀತಿಯಾಗಿ ಮಾಡಲಿಕ್ಕೆ ಅವನಲ್ಲಿದ್ದ ! ರಾಜ್ಯದಾಶೆಯೇ ಮೂಲ ಕಾರಣವು ! ಅವನ ಸಂಕ್ಷೇಪ ಚರಿತ್ರವನ್ನು ಕೇಳಿರಿ—ಅದೇನಂದರೆ—ವಿಜಾಪುರ ಜಿಲ್ಹೆಗೆ ಸೇರಿದ ಬಾಗೇವಾಡಿಯೆಂಬಗ್ರಾಮದಲ್ಲಿ ೧೨ನೆಯ ಶತಮಾನದಲ್ಲಿ **ಮಾದರಸನೆಂಬ** ವೀರಶೈವ ಬ್ರಾಹ್ಮಣನು (ಆರಾಧ್ಯ ಬ್ರಾಹ್ಮಣನು) ಮಾಂಡಲಿಕ ರಾಜನಾಗಿದ್ದನು. ಇವ

ನಿಗೆ ಮಾದಲಾಂಬಿಕೆಯೆಂಬ ಹೆಂಡತಿ ಇದ್ದಳು. ಇವರಿಗೆ ಬಹು ದಿವಸಗಳವರೆಗೆ ಮಕ್ಕಳಾಗಲಿಲ್ಲವಾದಕಾರಣ ಮಾದಾಂಬಿಕೆಯು ಪುತ್ರ ಪ್ರಾಪ್ತಿಗಾಗಿ ಬಾಗೇವಾಡಿಯುಲ್ಲಿರತಕ್ಕ ನಂದೀಶ್ವರನಿಗೆ ಭಕ್ತಿಯಿಂದ ನಡೆದುಕೊಳ್ಳಲಿಕ್ಕೆ ಹತ್ತಿದಳು. ನನ್ನ ಉದರದಿಂದ ಮಗನು ಜನಿಸಿದನೆಂದರೆ ನಿನ್ನ ಹೆಸರನ್ನಿಡುತ್ತೇನೆಂದು ನಂದೀಶ್ವರನಿಗೆ ಮೊದಲೇ ಬೇಡಿಕೊಂಡಿದ್ದಳು. ಪೂರ್ವಪುಣ್ಯ ಪರಿಪಾಕದಿಂದ ಮಾದಾಂಬಿಕೆಯು ಗರ್ಭವನ್ನು ಧರಿಸಿ ಮೂರು ವರ್ಷಗಳ ಮೇಲೆ ಹಡೆದಳು. ನಾಮಕರಣವನ್ನು ಮಾಡುವ ಕಾಲಕ್ಕೆ ನಂದೀಶ್ವರನಿಗೆ ಕನ್ನಡದಲ್ಲಿ ಬಸವನೆಂದೆನ್ನುವ ಕಾರಣ ಆ ಮಗುವಿಗೆ „ ಬಸವ ” ಎಂಬ ಹೆಸರನ್ನಿಟ್ಟರು. ಮುಂದೆ ಅವನು ದೊಡ್ಡವನಾಗಿ ವಿದ್ಯೆ ಬುದ್ಧಿಗಳನ್ನು ಕಲಿತು ಪ್ರಸಿದ್ಧಿಗೆ ಬಂದನು. ಆಗ್ಯೆ ಇವನ ತಾಯಿಯು ಅಣ್ಣನಾದ **ಬಲದೇವನು** ತನ್ನ ಮಗಳಾದ **ಗಂಗವ್ವನನ್ನು** ಸೋದರಳಿಯನಾದ ಇವನಿಗೆ ಕೊಟ್ಟು ಲಗ್ನವನ್ನು ಮಾಡಿದನು. ಈ ಬಲದೇವನು ಬಿಜ್ಜಳನಲ್ಲಿ ಮುಖ್ಯ ಮಂತ್ರಿಯಾಗಿದ್ದನು. ಕೆಲವು ದಿವಸಗಳ ಮೇಲೆ ಇವನಿಗೆ ವ್ಯಾಧಿಯು ಪ್ರಾಪ್ತವಾಗಲಾಗಿ ತನ್ನ ಮಂತ್ರಿಯಪದವಿಯನ್ನು ಬಸವನಿಗೆ ವಹಿಸಿದನು. ಇವನುಮಂತ್ರಿಯಾದಮೇಲೆ ಸ್ವತಂತ್ರ ರಾಜನಾಗಬೇಕೆಂಬ ಆಶೆಯು ಇವನಲ್ಲಿ ಉತ್ಪನ್ನವಾಯಿತು. ಒಬ್ಬನರಾಜ್ಯವು ಮತ್ತೊಬ್ಬನಿಗೆ ದೊರೆಯಬೇಕಾದರೆ ಯುದ್ಧವಾಗದೆ ಎಂದೂ ದೊರೆಯುವದಿಲ್ಲವೆಂಬ ಸಂಗತಿಯನ್ನು ಇವನು ಮನಸ್ಸಿನಲ್ಲಿ ತಂದುಕೊಂಡು **ಗುಪ್ತರೀತಿಯಿಂದ ಸೇನೆಯನ್ನು** ಸಿದ್ಧಮಾಡಲುದ್ಯುಕ್ತನಾದನು. ತನ್ನ ಜಾತಿಯ ಆರಾಧ್ಯ ಬ್ರಾಹ್ಮಣರನ್ನು ಹಿಡಿದಿದ್ದಾದರೆ ಇವರು ಯುದ್ಧ ಮಾಡುವವರಲ್ಲವೆಂದೂ, ಕೆಳಗಿನತರಗತಿಯ ಜನರನ್ನು ಹಿಡಿದಿದ್ದಾದರೆ ಯುದ್ಧಕ್ಕೆ ಅನುಕೂಲವಾಗುವದೆಂಸೂ ಆಲೋಚಿಸಿ **ವರ್ಣಾಶ್ರಮ** ತಾರತಮ್ಯವನ್ನು ಮೀರಿ, ಸರ್ವಜಾತಿಯುವರೂ ಒಂದೇ ಇರುತ್ತಾರೆ. ಅವರಲ್ಲಿ ಯಾವ ಭೇದವನ್ನೂ ಎಣಿಸಕೂಡದೆಂದು ಬೋಧಿಸುತ್ತ ಆ ಕೆಳಗಿನ ಜಾತಿಯ ಜನರನ್ನು ಉಬ್ಬಿಸಿ **ಮಾದಿಗ-ಹೊಲೆಯ-ಡೋರ-ಚಲವಾದಿ-ಚಂಡಾಲ-ಮ್ಯಾದಾರ-ಅಗಸ-ಕ್ಷೌರಿಕ** ಮೊದಲಾದ ಅನೇಕ ಜಾತಿಯ ಜನರಿಗೆ ಲಿಂಗವನ್ನು ಕಟ್ಟಿ ಅವರನ್ನೆಲ್ಲ **ಜಂಗಮರೆಂದು** ಕರೆಯುತ್ತ ಅವರ ವಿಷಯದಲ್ಲಿ ಹೊರಗೆಮಾತ್ರ ಭಕ್ತಿಯನ್ನು ನಟಿಸಿದಂತೆ ಮಾಡಿ ತನ್ನ ಕಾರ್ಯಸಾಧನದಲ್ಲಿ ನಿರತನಾದನು. **೧ ಲಕ್ಷ ೯೬ ಸಾವಿರ ಮಿಂಡ ಪುಂಡ ಜಂಗಮರೆಂಬಲಂತೆ** ಜನರ ಗುಂಪನ್ನು ಕೂಡಿ ಹಾಕಿ ಇವರಿಗೆಲ್ಲ **ಪ್ರಮಥರೆಂಬ** ಹೆಸರನ್ನಿಟ್ಟು ತಾನು **ಮಾದಿಗ-ಡೋರ** ಮೊದಲಾದವರಲ್ಲಿ ಸಾಮರಸ್ಯವನ್ನು (ಸಹ ಭೋಜನವನ್ನು) ಮಾಡಲಿಕ್ಕೆ ಹತ್ತಿದನು. ಸರ್ವೋತ್ತಮನಾದ ಆರಾಧ್ಯ ಬ್ರಾಹ್ಮಣನೂ ಹಾಗೂ ದೊಡ್ಡ ಮಂತ್ರಿಯೂ ಆದ ಇವನು ಈರೀತಿಯಾಗಿ ಕೆಳಗಿನ ತರಗತಿಯ ಜನರಲ್ಲಿ ಪೂಜ್ಯ ಬುದ್ಧಿಯನ್ನು ತೋರಿಸಲಾಗಿ ಆ ಜನರಾದರೂ ಇವನವಿಷಯದಲ್ಲಿ ಪ್ರಾಣವನ್ನರ್ಪಿಸಲಿಕ್ಕೂ ಕೂಡ ಸಿದ್ಧರಾದರೆಂದು ಹೇಳುವದರಲ್ಲೇನಾಶ್ಚರ್ಯವು?

ಇವನ ಈತರದ ವೇದವಿರುದ್ಧವಾದ ಜಾತಿಸಾಂಕರ್ಯ ತತ್ವಕ್ಕೆ ವೇದಮಾರ್ಗ ಪ್ರತಿಷ್ಠಾಪಕರಾದ **ಪಂಚ ಸಿಂಹಾಸನಾಧಿಪತಿಗಳು** ವಿರುದ್ಧರಾಗಿದ್ದ ಕಾರಣ ಇವನು ಆ ಸಿಂಹಾಸನಗಳಿಗೆ ವಿರುದ್ಧವಾಗಿ ತನ್ನ ಕಲ್ಯಾಣಪಟ್ಟಣದಲ್ಲಿಯೇ **ಶೂನ್ಯಸಿಂಹಾಸವೆಂಬ** ಹೆಸರಿನ ನೂತನ ಮಠವನ್ನು ಕಟ್ಟಿಸಿ ಆಮಠಕ್ಕೆ ಶಿವಮೊಗ್ಗಾ ಡಿ॥ ಶಿಕಾರಪುರ ತಾ॥ ಬಳಗಾಂವ ಎಂಬ ಗ್ರಾಮದಲ್ಲಿ ಹುಟ್ಟಿದ **ಅಲ್ಲಮನೆಂಬವನನ್ನು** ಅಧಿಕಾರಿಯನ್ನಾಗಿ ಮಾಡಿ ಅನೇಕ ಕೆಟ್ಟ ಕೆಟ್ಟ ಜಾತಿಯ ಜನರಿಗೆ ಲಿಂಗವನ್ನು ಕಟ್ಟಿ **ವಿರಕ್ತರನ್ನು** ಮಾಡಿ ಅವರಿಗೆ **ಜಂಗಮರೆಂದು** ಹೆಸರನ್ನಿಟ್ಟು ಒಂದು ವಿಲಕ್ಷಣವಾದ ವಿರಕ್ತ ಪಂಥವನ್ನೇ ಎಬ್ಬಿಸಿದನು. ತನ್ನ ಸಂಕರ ಜಾತಿಗೆಲ್ಲ ಅವರನ್ನೇ ಮುಖ್ಯರನ್ನಾಗಿ ಮಾಡಿದನು. ಹೀಗೆ ಕೆಲವು ದಿವಸಗಳು ಹೋದ ಮೇಲೆ ತನ್ನ ಪಂಗಡಕ್ಕೆ ಸೇರಿದ ಅನೇಕ ಜಾತಿಗಳಲ್ಲಿಯ ನ್ಯೂನಾಧಿಕ ಜಾತಿಭೇದಭಾವವನ್ನು ಮುರಿದು ಹಾಕಿ **ಒಂದೇ ಜಾತಿಯನ್ನು** ಮಾಡಬೇಕೆಂದು ಆಲೋಚಿಸಿ, **ಮಿಶ್ರ ವಿವಾಹ ಪದ್ಧತಿಯನ್ನು** ನೆಲೆಗೊಳಿಸಿದರೆ ಜಾತಿಭೇದಗಳೆಲ್ಲ ನಷ್ಟವಾಗುವವೆಂದು ಭಾವಿಸಿ **ಮಾದಿಗರಿಗೂ ಬ್ರಾಹ್ಮಣರಿಗೂ ವಿವಾಹವನ್ನು** ಮಾಡಿಸಲುದ್ಯುಕ್ತನಾದನು. ಧರ್ಮಶಾಸ್ತ್ರಕ್ಕೆ ಅತ್ಯಂತ ವಿರುದ್ಧವಾದ ಈ ಕೃತಿಯನ್ನು ಬಿಜ್ಜಳ ಭೂಪಾಲನು ತಿಳಿದು ಇಂಥ ನೀಚ ಕೃತಿಯಲ್ಲಿ ನಿರತರಾದ ಮಾದಿಗರ ಹರಳಯ್ಯನ ಹಾಗೂ ಬ್ರಾಹ್ಮಣ ಮಧುವಯ್ಯನ ಕಣ್ಣುಗಳನ್ನು ರಾಜ ನೀತಿಗನುಸಾರವಾಗಿ ಕೀಳಿಸಿದನು. ಆಗ್ಯೆ ತಾನು ಮಾಡಿದ ಕಾರ್ಯಕ್ಕೆ ಈ ಬಿಜ್ಜಳನು ವಿಘ್ನವನ್ನು ತಂದನೆಂದುತಿಳಿದು ಅವನನ್ನು ಕೊಲ್ಲಿಸಿದನು. ಅನಂತರ ಇವನ ಸೈನ್ಯಕ್ಕೂ, ಬಿಜ್ಜಳನ ಸೈನ್ಯಕ್ಕೂ ಘೋರವಾದ ಯುದ್ಧವಾಯಿತು. ಬಿಜ್ಜಳನನ್ನು ಕೊಲ್ಲಿಸಿದ ಸಿಟ್ಟಿನಿಂದ ಅವನ ಮಗನಾದ **ರಾಯಮುರಾರಿಯು** ಈ ಬಸವನನ್ನು ಕೊಲ್ಲಲು ಸೈನ್ಯವನ್ನು ಕಳುಹಿಸಲಾಗಿ ನದಿಗಳ **ಸಂಗಮ**ದಲ್ಲಿ ಬಿದ್ದು ಪ್ರಾಣವನ್ನು ಬಿಟ್ಟನು. ಇವನೀತರದ ಐತಿಹಾಸಿಕ ಚರಿತ್ರವು ಬಸವ ಪುರಾಣ—ಚನ್ನ ಬಸವ ಪುರಾಣ—ಪ್ರಭುಲಿಂಗ ಲೀಲಾ—ಶರಣ ಲೀಲಾಮೃತ—ಶಿಂಗಿರಾಜ ಪುರಾಣ—ಕಾಡಶಿದ್ದೇಶ್ವರ ವಚನ—ಬಸವನ ವಚನ—ಆಂಧ್ರವಾಙ್ಮಯ ಚರಿತ್ರ-ಹಿಂದೂ ಚರಿತ್ರ--ಪ್ರಾಕ್ಕಾವ್ಯ ಮಾಲಿಕಾ—ಬಾಂಬೇ ಗ್ಯಾಝೀಟಿಯರ್—ದುರ್ಗದವರ ಪಟ್ಟವಲ್ಲರಿ—ಜೆ. ಗ್ಯಾರೆಟ್ ಸಾಹೇಬರ ಪ್ರಸ್ತಾವನಾ—ಡಾ॰ ಫ್ಲೀಟ್ ಸಾಹೇಬರ ಲೇಖ—ಬಾಗಲಕೋಟೆಯಲ್ಲಿ ನೆರವೇರಿದ ವೀರಶೈವ ಮಹಾ ಸಭೆಯಲ್ಲಿ ಪಾಸಾದ ಮ॥ ರಾ॥ ಮಲ್ಲಿಕಾರ್ಜುನಪ್ಪ ಕಲ್ಯಾಣಶೆಟ್ಟಿ ಬಿ. ಎ ಇವರ ಲೇಖ—ಇವೇ ಮೊದಲಾದ ಅನೇಕ ಗ್ರಂಥ ಹಾಗೂ ಲೇಖಗಳನ್ನು ಆಲೋಚನ ಮಾಡಿ ನೋಡುತ್ತಿರಲಿಕ್ಕೆ ಹೊರಬೀಳುತ್ತದೆ. ಹೀಗಿದ್ದಾಗ್ಯೂ **ಪಾಲ್ಕುರಿಕೆಸೋಮನಾಥನೆಂಬ** ಕವಿಯು ಇವನ ಮೇಲಿನ ಅಸಾಧಾರಣವಾದ ವಿಶ್ವಾಸದಿಂದ ಮೊದಲು ಇವನ ಚರಿತ್ರವನ್ನು ತೆಲಗು ಭಾಷೆಯಲ್ಲಿ ಬರೆದು ಮನಸ್ಸಿಗೆ ಬಂದಂತೆ ಕಾಲ್ಪನಿಕವಾಗಿ [illegible]ಸವನ್ನು ಮಾಡಿ ಆ ಚರಿತ್ರಕ್ಕೆ ಬೇರೊಂದು ರೀತಿಯಾಗಿ ರೂಪಾಂತ

ರವನ್ನು ಕೊಟ್ಟೆನು. ಬಸವ ಪುರಾಣ–ಚನ್ನಬಸವ ಪುರಾಣ-ಪ್ರಭುಲಿಂಗಲೀಲಾ ಎಂಬೀ ಮೂರೂ ಗ್ರಂಥಗಳನ್ನು ಆದಿಯಲ್ಲಿ ಆಂಧ್ರ ಭಾಷೆಯಿಂದ ಈ ಸೋಮನಾಥನೇ ಬರೆದನು. ಇದರ ಮೇಲಿಂದ ಜಾತಿ ಸಂಕರ ಕಾರ್ಯದಲ್ಲಿ ಪಟ್ಟವನ್ನು ಕಟ್ಟಿಕೊಂಡ ಬಸವ–ಚನ್ನಬಸವ–ಅಲ್ಲಮರೆಂಬ ತ್ರಿವರ್ಗದಲ್ಲಿ ಅವನ ವಿಶ್ವಾಸವು ಬಹಳವಾಗಿತ್ತೆಂದು ತೋರುತ್ತದೆ. ಬಸವಾದಿಗಳ ಬಗ್ಗೆ ಮನಸ್ಸಿಗೆ ಬಂದಂತೆ ಗ್ರಂಥಗಳನ್ನು ಬರೆದು ಅವರನ್ನು ವಿಶೇಷವಾಗಿ ಮುಂದಕ್ಕೆ ತಂದ ಮೊದಲನೆಯ ಕವಿಯು ಇವನೇ ಆಗಿರುತ್ತಾನೆ.

ಈ ಸೋಮನಾಥ ಕವಿಯು ಗತಿಸಿದ ಕೆಲವು ದಿನಗಳಮೇಲೆ ಅನೇಕಜನ ಕವಿಗಳು ಸೋಮನಾಥನು ಬರೆದಗ್ರಂಥಗಳನ್ನೇ ಆಧಾರವಾಗಿಟ್ಟುಕೊಂಡುಕನ್ನಡದಲ್ಲಿಬಸವಾದಿಗಳ ಚರಿತ್ರಗಳನ್ನು ಬರೆದು ಕನ್ನಡಪ್ರಾಂತದಲ್ಲಿ ವಿಶೇಷವಾಗಿ ಹಬ್ಬಿಸಿದರು. **ಹೇಲಾಪುರದ ಬಸವಕವಿಯೆಂಬವನು** ಬಸವನ ಪುರಾಣವನ್ನು ತಾನು ಸಂಸ್ಕೃತದಲ್ಲಿ ಬರೆದಾಗ್ಯೂ ಹಾಗೂ **ಹಂಪೆಯ ವಿರುಪಾಕ್ಷ ಪಂಡಿತನು** ಪ್ರಭುಲಿಂಗ ಲೀಲೆಯನ್ನು ತಾನು ಸಂಸ್ಕೃತದಲ್ಲಿ ಬರೆದಾಗ್ಯೂ ಅವುಗಳಿಗೆ ತಮ್ಮ ತಮ್ಮ ಹೆಸರುಗಳನ್ನಿಟ್ಟುಕೊಳ್ಳದೆ **ವ್ಯಾಸ ಮಹರ್ಷಿಯ** ಹೆಸರನ್ನಿಟ್ಟದ್ದಾದರೆ ಇವರ ಚರಿತ್ರಗಳು ಲೋಕ ಮಾನ್ಯಗಳಾಗುವವೆಂಬದುರ್ಬುದ್ಧಿಯಿಂದವ್ಯಾಸಕೃತಗಳೆಂದು ಪ್ರಸಿದ್ಧ ಮಾಡಿದ್ದಾರೆ. (೩೩ ನೆಯ ವಿಮರ್ಶವನ್ನು ನೋಡಿರಿ)ಅಂದಮೇಲೆ ಬಸವನ ಮೇಲಿರತಕ್ಕ ವಿಶ್ವಾಸದಿಂದ ಹಿಂದಕ್ಕೆ ಕವಿಗಳು ಏನೇನು ಕುಕಲ್ಪನವನ್ನು ಮಾಡಿ ಬರೆದಿರಬಹುದೆನ್ನುವದನ್ನು ಕುಶಲಮತಿಗಳಾದ ವಾಚಕರು ಊಹಿಸಬಹುದು. ಒಟ್ಟಿಗೆ ಬಸವಾದಿಗಳ ಚರಿತ್ರಗಳು ವಿಶೇಷವಾಗಿ ಕಲ್ಪನಾತ್ಮಕಗಳಾಗಿರುತ್ತವೆ. ಬಸವಾದಿಗಳ ಈ ನಿಜತತ್ವಗಳನ್ನು ಕಂಡುಹಿಡಿಯುವದಕ್ಕಾಗಿಯೇ ಹಮ್ಮಿಗಿ ಶಾಂತಪ್ಪನವರು ಪ್ರಶ್ನಗಳನ್ನು ತೆಗೆದಿದ್ದರೂ, ದುರಭಿಮಾನದಿಂದೊಡಗೂಡಿ ಅವುಗಳಿಗೆ ಬೇರೊಂದುರೀತಿಯಿಂದ ಉತ್ತರಗಳನ್ನು ಬರೆದಕಾರಣ ಆ ಉತ್ತರಗಳು ಅಯೋಗ್ಯಗಳಾಗಿರುವವೆಂದು ಪುನರ್ವಿಮರ್ಶ ಮಾಡಿ ಪ್ರಶ್ನಕರ್ತರ ಪ್ರಶ್ನಾಭಿಪ್ರಾಯಗಳೇ ಸಾಧುವೆಂದು ಈ ಗ್ರಂಥದಲ್ಲಿ ನಿರ್ಣಯಿಸಲ್ಪಟ್ಟದೆ ಆದ್ದರಿಂದ ವಾಚಕರು ಅವುಗಳನ್ನೆಲ್ಲ ನಿಷ್ಪಕ್ಷಪಾತ ಬುದ್ಧಿಯಿಂದ ಪರಿಶೀಲಿಸಿ ಅವೈದಿಕ ಮಾರ್ಗಗಾಮಿಯಾದ ಬಸವನ ಸಂಬಂಧವನ್ನು ದೂರೀಕರಿಸಿ ಕೇವಲ ವೇದಸಂಮತವಾದ ಶುದ್ಧವೀರಶೈವ ಸಾಂಪ್ರದಾಯವನ್ನು ಹಿಡಿದು ಪರಮಾತ್ಮನ ಕೃಪೆಗೆ ಪಾತ್ರರಾಗಿ ಇಹಪರದಲ್ಲಿ ಯಶೋಭಾಗಿಗಳಾಗಬೇಕೆಂದು ನೆನೆದು ಈ ಲೇಖಕ್ಕೆ ವಿರಾಮವನ್ನು ಕೋರುತ್ತೇನೆ.

| | |
|---|---|
| **ಉಜ್ಜಯಿನೀ** | **ತಮ್ಮ** |
| ತಾ॥ ೧೧—೧೧—೧೯೩೩. | **ಪಂಡಿತ ಶ್ರೀ ಗುರುಸಿದ್ಧ ಶಾಸ್ತ್ರೀ.** |

ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು.

# ಬಸವಧ್ವಾಂತ ದಿವಾಕರ್

C. M. Sharma Mahagunda

ಪೂರ್ವಂ ಸೃಷ್ಟಿಸಮುದ್ಭವಾತ್ಪರಶಿವಾದುದ್ಭೂಯ ಸದ್ವೈಭವಾತ್ ।
ಸಿದ್ಧಾಂತಂ ಶ್ರುತಿಸಿದ್ಧಮುದ್ಭುತತಮಂ ಸಂಸ್ಥಾಪ್ಯ ಸಂವಿಶ್ರುತಾಃ ॥
ಸಿದ್ಧಸ್ತೋಮಸುರದ್ರುಮಾಃ ಸುರವರೈಃ ಸಂಸೇವ್ಯಮಾನಾಃ ಸದಾ ।
ಪಂಚಾಚಾರ್ಯಗುರೂತ್ತಮಾಃ ಸಕರುಣಾ ಸಿದ್ಧಿಂ ವಿತನ್ವಂತು ಮೇ ॥

ವರ್ಣಾಶ್ರಮಾನ್ ತಿರಸ್ಕೃತ್ಯ ವರ್ಣಸಾಂಕರ್ಯಚೇತಸಾಂ ॥
ಮರ್ತ್ಯಾನಾಂ ಸುಮತಿಂ ದತ್ವಾ ಧರ್ಮಂ ರಕ್ಷಂತ ದೇಶಿಕಾಃ ॥ ೨ ॥

ಲೋಕಮಾನ್ಯವಾದ ಬಸವಾದಿ ನಿಜತತ್ವದರ್ಪಣವೆಂಬ ಗ್ರಂಥದಲ್ಲಿದ್ದ ಪ್ರಶ್ನೆಗಳಿಗೆ ನಾಮಮಾತ್ರದಿಂದ ಉತ್ತರವನ್ನು ಬರೆದೆನೆಂದು ಹೇಳಿಸಿಕೊಳ್ಳುವ ಬಸವ ರಾಜಶಾಸ್ತ್ರಿ ಮಾಗಳ ಎಂಬ ಮಹಾ ಪಂಡಿತನ ಉತ್ತರಗಳ ಅನುಕ್ರಮವಾದ ವಿಮರ್ಶವು!

(೧ ನೆಯ ಉತ್ತರದ ವಿಮರ್ಶವು) ಉತ್ತರವಾದಿಯೇ — “ ವೀರಶೈವ ಸಿದ್ಧಾಂತವಾವುದು ಹಾಗೂ ಅದರ ಸ್ವರೂಪವೇನು? „ ಎಂದು ಕೇಳಿದ ಪ್ರಶ್ನಕ್ಕೆ — ಶಕ್ತಿ ವಿಶಿಷ್ಟಾದ್ವೈತವೇ ವೀರಶೈವ ಸಿದ್ಧಾಂತವೆಂತಲೂ ಜ್ಞಾನಕ್ರಿಯೋಭಯಾತ್ಮಕತ್ವವೇ ತತ್ಸ್ವರೂಪವೆಂತಲೂ ಉತ್ತರವನ್ನು ಬರೆದಿರುವಿ; ಅಸಾಧಾರಣವಾದ ಬುದ್ಧಿಯನ್ನು ಖರ್ಚು ಮಾಡಿ ಈ ಪ್ರಕಾರವಾಗಿ ಉತ್ತರವನ್ನು ಬರೆದಿರುವ ನಿನ್ನ ಬುದ್ಧಿಗೆ ಬೆಲೆಯನ್ನು ಕಟ್ಟುವರಾರು? ವಾಚಕ ಮಹಾಶಯರೇ— ಈ ಉತ್ತರವು ಘಟಸ್ವರೂಪವಾವುದೆಂಬ ಪ್ರಶ್ನಕ್ಕೆ ಕಂಬುಗ್ರೀವಾದಿಮದ್ವ್ಯಕ್ತಿತ್ವವೇ ತತ್ಸ್ವರೂಪವೆಂದು ಹೇಳುವದನ್ನು ಬಿಟ್ಟು ತತ್ಸಾಧಕವಾದ ದಂಡವೇ ಘಟಸ್ವರೂಪವೆಂದು ಹೇಳುವ ವಿಕಟಪಂಡಿತನ ಉತ್ತರಕ್ಕೆ ಸಮಾನವಾಗಿದೆ. ಈ ಲೇಖಕನು ವೀರಶೈವ ಮತದ ಪ್ರತಿಯೊಬ್ಬ ಮೂಢ ಮನುಷ್ಯನಿಗೂ

ಕೂಡ ಗೊತ್ತಿದ್ದ ಶಕ್ತಿ ವಿಶಿಷ್ಟಾದ್ವೈತವೆಂಬ ಹೆಸರನ್ನು ಮಾತ್ರ ಕೇಳಿರುವನಲ್ಲದೆ ಅದರ ಸ್ವರೂಪವನ್ನು ವೀರಶೈವ ಸಿದ್ಧಾಂತಜ್ಞರಾದ ಗುರುಗಳ ಮುಖದಿಂದ ಅರಿತು ಕೊಂಡಿಲ್ಲವೆನ್ನುವದಲ್ಲಿ ಈತನ ಬರವಣಿಗೆಯೇ ದೊಡ್ಡ ಸಾಕ್ಷಿಯಾಗಿದೆ; ಅಸ್ತು ! ಪಂಡಿತನಾಮಧಾರಿಯೇ! ಮೊದಲನೆಯ ಪ್ರಶ್ನದ ನಿನ್ನ ಉತ್ತರವು « ಪ್ರಥಮ ಭಕ್ಷಣೇ ಮಕ್ಷಿಕಾ ಪಾತಃ " ಎಂಬ ಗಾಥಾ ವಾಕ್ಯಕ್ಕೆ ಅನುಗುಣವಾಗಿದೆ. ನೀನು ಮೊದಲನೆಯ ಪ್ರಶ್ನಕ್ಕೆ ಇಷ್ಟು ಸಮಂಜಸವಾದ ಉತ್ತರವನ್ನು ಬರೆದ ಮೇಲೆ ಉಳಿದ ಪ್ರಶ್ನಗಳಿಗೆ ಬರೆದಿರುವ ಉತ್ತರಗಳು ಎಷ್ಟು ಸಮಂಜಸಗಳಾಗಿರಬಹುದೆನ್ನುವದನ್ನು ನೀನೇ ಊಹಿಸು ! ಲೇಖಕನೇ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತದ ಸ್ವರೂಪವು ಕ್ರಿಯಾಜ್ಞಾನಾತ್ಮಕವೋ? ಜ್ಞಾನಕ್ರಿಯೆಗಳು ಇದಕ್ಕೆ ಸಾಧಕಗಳಲ್ಲನೇ ? ಸಾಧಕಗಳಾದ ಕ್ರಿಯಾಜ್ಞಾನಗಳು ಶಕ್ತಿವಿಶಿಷ್ಟಾದ್ವೈತಸಿದ್ಧಾಂತ ಸ್ವರೂಪವಾಗುವವೋ ? ನೀನು ಕೊಟ್ಟಿರುವ ಪ್ರಮಾಣಗಳಿಂದ ಜ್ಞಾನಕ್ರಿಯೆಗಳು ಮುಕ್ತಿಗೆ ಸಾಧಕಗಳೆಂದು ಸಿದ್ಧವಾಗುವದಿಲ್ಲವೇ ? ಶಕ್ತಿವಿಶಿಷ್ಟಾದ್ವೈತವೆನ್ನುವದು ಮುಕ್ತಿಯಲ್ಲವೇ? ಈ ಮಹಾಸಿದ್ಧಾಂತದ ಸ್ವರೂಪವನ್ನರಿಯದೆ ಜ್ಞಾನಕ್ರಿಯಾ ಸಮುಸಮುಚ್ಚಯ ಶ್ಲೋಕಗಳು ಅಚ್ಚಾದಗ್ರಂಥಗಳಲ್ಲಿ ಹೇರಳವಾಗಿರುವವೆನ್ನುವದನ್ನು ನೋಡಿ ನಿಷ್ಪ್ರಯೋಜನವಾಗಿ ಹಾಳೆತುಂಬ ಬರೆದಿರುವಿಯಲ್ಲ. ! ಶಹಬಾಸ–ಪಂಡಿತನಾಮಧಾರಿಯೇ ಇದು ನಿನ್ನ ಪಾಂಡಿತ್ಯಕ್ಕೆ ಭೂಷಣವೇ ಸರಿ! ಲೇಖಕನೇ– ನೀನು ಶಕ್ತಿವಿಶಿಷ್ಟಾದ್ವೈತಸಿದ್ಧಾಂತದ ಸ್ವರೂಪವನ್ನು ತಿಳಿದು ಕೊಂಡಿಲ್ಲ; ಆದಕಾರಣ ಆ ಸಿದ್ಧಾಂತದ ಸ್ವರೂಪವನ್ನು ಆ ಮೂಲಾಗ್ರವಾಗಿ ತಿಳಿದುಕೊಂಡು ಮಾಹೇಶ್ವರ ವಂಶದಲ್ಲಿ ಹುಟ್ಟಿರುವದನ್ನಾದರೂ ಸಾರ್ಥಕ ಮಾಡಿಕೊಳ್ಳು ! ಕೇಳು ! " ಶಕ್ತಿಶ್ಚ–ಶಕ್ತಿಶ್ಚ–ಶಕ್ತೀ= ಸ್ಥೂಲಚಿದಚಿತ್ಪ್ರಪಂಚಾಕಾರಶಕ್ತಿ ಸೂಕ್ಷ್ಮಚಿದಚಿತ್ಪ್ರಪಂಚಾಕಾರ ಶಕ್ತೀ– ತಾಭ್ಯಾಂ– ವಿಶಿಷ್ಟೌ– ಅವಿನಾಭೂತೌ ಜೀವೇಶೌ– ತಯೋರದ್ವೈತಂ– ಏಕತ್ವೇನ ಸಾಮರಸ್ಯಂ– ಶಕ್ತಿವಿಶಿಷ್ಟಾದ್ವೈತಂ ॥ ಈ ಸಿದ್ಧಾಂತದ ಸ್ವರೂಪವನ್ನು ಸ್ಪಷ್ಟವಾಗಿ ಕನ್ನಡದಲ್ಲಿ ವಿವರಿಸುತ್ತೇವೆ. ಕೇಳು! ಕೇವಲ ಒಂದಾದ ಶಕ್ತಿಯು ಸ್ಥೂಲಸೂಕ್ಷ್ಮ ಭೇದದಿಂದ ಎರಡು ಪ್ರಕಾರವಾಯಿತು. ಸ್ಥೂಲಶಕ್ತಿಯು ಜಡವೆಂತಲೂ, ಸೂಕ್ಷ್ಮಶಕ್ತಿಯು ಅಜಡವೆಂತಲೂ ತಿಳಿಯಬೇಕು. ಸ್ಥೂಲಶಕ್ತಿಯು " ಅಚಿತ್–ಚಿತ್ " ಎಂದು ಎರಡು ಪ್ರಕಾರ ವಾಗಿರುವದು. ಸ್ಥೂಲಾಚಿಚ್ಛಕ್ತಿಯೆಂದರೆ ಜೀವಾತ್ಮನ ಕಿಂಚಿತ್ಕರ್ತೃತ್ವರೂಪವಾದ ಕ್ರಿಯಾಶಕ್ತಿಯು ! ಸ್ಥೂಲಚಿಚ್ಛಕ್ತಿಯೆಂದರೆ ಜೀವಾತ್ಮನ ಕಿಂಚಿಜ್ಜ್ಞತ್ವರೂಪವಾದ ಜ್ಞಾನಶಕ್ತಿಯು! ಸ್ಥೂಲ ಕ್ರಿಯಾಶಕ್ತಿಯಲ್ಲಿ ಜೀವಾತ್ಮನ ನಿದ್ರಾಲಸ್ಯಾದಿಗಳೂ, ಪಂಚಕರ್ಮೇಂದ್ರಿಯಗಳೂ ಹಾಗೂ ಪಂಚಪ್ರಾಣಗಳೂ ಅಂತರ್ಗತಗಳಾಗುವವು; ಸ್ಥೂಲ ಜ್ಞಾನಶಕ್ತಿಯಲ್ಲಿ ಜೀವಾತ್ಮನ ಕಾಮಕ್ರೋಧಾದಿಗಳೂ ಹಾಗೂ ಪಂಚಜ್ಞಾನೇಂದ್ರಿಯಗಳೂ ಅಂತರ್ಗತಗಳಾಗುವವು. ಈ ಕಿಂಚಿತ್ಕರ್ತೃತ್ವ ಕಿಂಚಿಜ್ಜ್ಞತ್ವ ರೂಪಗಳಾದ ಕ್ರಿಯಾಜ್ಞಾನ

ಶಕ್ತಿಗಳಿಗೆ ಆಶ್ರಯವಾದ ಜೀವಾತ್ಮನ ಇಚ್ಛಾಶಕ್ತಿಯೇ ಚಿತ್ತವು! ಇದೇ ಅಂತಃಕರಣವು! ಈ ಜಡಶಕ್ತಿಯಿಂದ ಕೂಡಿದ ಶಿವಾಂಶ ರೂಪವಾದ ಶಿವಪ್ರಕಾಶವೇ ಜೀವಾತ್ಮನು! ಇನ್ನು ಸೂಕ್ಷ್ಮಶಕ್ತಿಯೂ ಕೂಡ ಎರಡು ಪ್ರಕಾರವಾಗಿರುವದು. ಒಂದು ಸೂಕ್ಷ್ಮವಾದ ಅಚಿತ್ಪ್ರಪಂಚಕ್ಕೆ ಕಾರಣವಾದ ಕ್ರಿಯಾಶಕ್ತಿಯು! ಮತ್ತೊಂದು ಸೂಕ್ಷ್ಮವಾದ ಚಿತ್ಪ್ರಪಂಚಕ್ಕೆ ಕಾರಣವಾದ ಜ್ಞಾನಶಕ್ತಿಯು! ಶಿವನ ಈ ಕ್ರಿಯಾಜ್ಞಾನಶಕ್ತಿಗಳಿಗೆ ಸರ್ವಕರ್ತೃತ್ವ ಸರ್ವಜ್ಞತ್ವ ಶಕ್ತಿಗಳೆಂದು ಹೇಳುವದುಂಟು. ಈ ಕ್ರಿಯಾಜ್ಞಾನ ಶಕ್ತಿಗಳಿಗೆ ಆಶ್ರಯವಾದ ಶಿವಸಂಕಲ್ಪವೆಂಬ ವಿಮರ್ಶಶಕ್ತಿಗೆ ಇಚ್ಛಾಶಕ್ತಿಯೆಂದು ಹೆಸರುಂಟು! ಈ ಶಕ್ತಿಯಿಂದ ಕೂಡಿದವನೇ ಚಿದಾನಂದಾತ್ಮಕನಾದ ಶಿವನು! ಈ ಪ್ರಕಾರವಾಗಿದ್ದ ಶಿವಜೀವರಿಗೆ ಅದ್ವೈತವನ್ನು ಪ್ರತಿಪಾದಿಸುವ ಸಿದ್ಧಾಂತವೇ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವೆನಿಸುತ್ತದೆ. ಜಡವಾದ ಚಿತ್ತಶಕ್ತಿಯಿಂದ ಕೂಡಿದವನು ಜೀವಾತ್ಮನೆಂತಲೂ, ಅಜಡವಾದ ವಿಮರ್ಶ ಶಕ್ತಿಯಿಂದ ಕೂಡಿದವನು ಶಿವನೆಂತಲೂ ಹೇಳುವವಿಷಯದಲ್ಲಿ "ಚಿತ್ತಮಾತ್ಮಾ" ಹಾಗೂ "ಚೈತನ್ಯಮಾತ್ಮಾ" ಎಂಬ ಶಿವಸೂತ್ರಗಳೇ ಪ್ರಮಾಣಗಳಾಗಿರುವವು. ಜೀವನು ತನ್ನ ಸಂಕುಚಿತವಾದ ಜಡಶಕ್ತಿಯಲ್ಲಿರುವ ಜಾಡ್ಯವನ್ನು ಶಿವಯೋಗಾಭ್ಯಾಸದಿಂದ ಕಳೆದುಕೊಂಡು ಶುದ್ಧಾತ್ಮನಾಗಿ ಸೂಕ್ಷ್ಮಶಕ್ತಿಯಿಂದ ಕೂಡಿದ ಶಿವನಲ್ಲಿ ಸಮರಸನಾಗಿ ಅಭಿನ್ನನಾಗುವನು. ಇದೇ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತಸ್ವರೂಪವೆಂದು ತಿಳಿ!

(೨-೩-೪ ಉ-ವಿ.) "ಲಿಂಗಾಯತ" ಎಂಬ ನಾಮವು ವೀರಶೈವಮತಬೋಧಕವಾಗಿರುವದೋ ಹೇಗೆ? ಹಾಗಿದ್ದ ಪಕ್ಷದಲ್ಲಿ ಈ ನಾಮವನ್ನು ಯಾರಾದರೂ ಪ್ರಾಚೀನ ಗ್ರಂಥಕಾರರು ತಮ್ಮ ತಮ್ಮ ಗ್ರಂಥಗಳಲ್ಲಿ ಉದಾಹರಿಸಿದ್ದಾರೆಯೋ ಹೇಗೆ? ಎಂದು ಪ್ರಶ್ನೆ ಮಾಡಿದ್ದಕ್ಕೆ ನೀನು ಪ್ರಾಚೀನ ಗ್ರಂಥ ಪ್ರಮಾಣಗಳನ್ನು ಕೊಡದೆ "ಲಿಂಗೇ-ಆ-ಸಮಂತತಃ-ಯತಂ-ಯಸ್ಯ-ಸಃ=ಲಿಂಗಾಯತಃ" ಈ ರೀತಿಯಾಗಿ ಮನಸ್ಸಿಗೆ ಬಂದಂತೆ ಸಮಾಸವನ್ನು ಮಾಡಿ ಕೊಂಡು ಈ ಶಬ್ದವು ಸಂಸ್ಕೃತವೆಂದೇ ಸಾಧಿಸುವದಕ್ಕೋಸ್ಕರ ದುರಭಿಮಾನವನ್ನು ವಹಿಸಿ ಕ್ಲಿಷ್ಟರೀತಿಯಿಂದ ಸಾಧಿಸಿರುವದು ಶಿಷ್ಟರ ಲಕ್ಷಣವಲ್ಲ! ಯಾಕಂದರೆ ಕ್ಲಿಷ್ಟರೀತಿಯಿಂದ ಸಾಧಿಸ ಹೋದರೆ ಜಗತ್ತಿನಲ್ಲಿ ಯಾವ ಭಾಷೆಯ ಶಬ್ದಗಳೂಕೂಡ ಉಳಿಯುವದಿಲ್ಲವೆಂದು ತಿಳಿ! "ಲಿಂಗಾಯತ" ಶಬ್ದದಂತಿರುವ "ಬಾಗಾಯತ" ಎಂಬ ಅರಬ್ಬೀ ಭಾಷೆಯ ಶಬ್ದವನ್ನು ಸಂಸ್ಕೃತದಲ್ಲೇ ಸಾಧಿಸುತ್ತೇವೆ- ನೋಡು! "ಬಕ್ಚ- ಅಗಶ್ಚ- ಬಾಗೌ- ಗಗನಪರ್ವತೌ- ತಾವಿವ- ಆಯತಃ- ದೀರ್ಘಃ= ಬಾಗಾಯತಃ" ಈ ಪ್ರಕಾರವಾಗಿ ಮನಸ್ಸಿಗೆ ಬಂದಂತೆ ಸಮಾಸವನ್ನು ಮಾಡಿಕೊಂಡು ಅರ್ಥವನ್ನು ಕಲ್ಪಿಸಿದ್ದರೆ ವಿಚಾರ ಶಾಲಿಗಳು ಎಂದೂ ಒಪ್ಪಲಾರರು! ಅನ್ಯ ಭಾಷಾ

ಮಿಶ್ರಿತ ಶಬ್ದಗಳನ್ನು ದುರಭಿಮಾನದಿಂದ ಸಂಸ್ಕೃತ ಭಾಷೆಯಲ್ಲಿ ಸಾಧಿಸುವದು ಕೇವಲ ಪಾಪವಲ್ಲದೆ ಬೇರೊಂದಿಲ್ಲ! ಆದಕಾರಣ ನೀನು ಈ ಅಪಮಾರ್ಗವನ್ನು ಬಿಟ್ಟು ಸನ್ಮಾರ್ಗವನ್ನು ಹಿಡಿಯುವದೇ ಲೇಸೆಂದು ಭಾವಿಸು! ಇರಲಿ; ಈ “ ಲಿಂಗಾಯತ ” ಶಬ್ದದ ಬಗ್ಗೆ ಪ್ರಾಚೀನಗ್ರಂಥ ಪ್ರಮಾಣಗಳನ್ನು ತೋರಿಸೆಂದು ಕೇಳಿದ್ದಕ್ಕೆ “ ಮಂತ್ರೈಶ್ಚ ಪರಿಪೂತಸ್ಯ ಲಿಂಗಂ ದರ್ಶಯತೇ ಗುರುಃ | ತಸ್ಮಾಚ್ಛಿಷ್ಯೋಽಥಭೋದೇವಿ ಲಿಂಗಾಯತ ಇತಿ ಸ್ಮೃತಃ ॥ ” ಎಂಬೀ ವೀರಶೈವಾಚಾರ ಪ್ರದೀಪಿಕೆಯ ಶ್ಲೋಕವನ್ನು ಉದಾಹರಿಸಿ ಈ ಶ್ಲೋಕದಲ್ಲಿ “ **ಲಿಂಗಾಯತ** ” ಎಂದು ಉಲ್ಲೇಖವಿರುವದೆಂದು ಬರೆದಿರುವಿ; ದಡ್ಡಾ— ಅದು “ **ಲಿಂಗಾಯತ** ” ಶಬ್ದವಲ್ಲ! “ **ಲಿಂಗಾಯತ್ತ** ” ಎಂಬ ಶಬ್ದವಿರುವದು. ಪ್ರಿಂಟಿನದೋಷದಿಂದ ತಕಾರದ ಒತ್ತು ಬಿದ್ದಿಲ್ಲ; ಹಾಗೂ ಈ ಶ್ಲೋಕಾಭಿಪ್ರಾಯದಿಂದಾದರೂ ನಿನ್ನ ಮನೋಭಿಪ್ರಾಯವು ಸಿದ್ಧಿಸುವಂತಿಲ್ಲ! ಯಾಕಂದರೆ ಸಪ್ತವಿಧ ದೀಕ್ಷೆಗಳಲ್ಲಿ “ **ಲಿಂಗಾಯತ್ತ** ” ಎನ್ನುವದೊಂದು ದೀಕ್ಷೆಯುಂಟು. ಆ “ **ಲಿಂಗಾಯತ್ತ** ” ದೀಕ್ಷೆಯಲ್ಲಿ ಆಚಾರ್ಯನು ಮಂತ್ರಾದಿಗಳಿಂದ ಪರಿಪೂತನಾದ ಶಿಷ್ಯನಿಗೆ ಲಿಂಗವನ್ನು ತನ್ನ ಹಸ್ತದಲ್ಲಿರಿಸಿ ದರ್ಶನಗೊಳಿಸುತ್ತಾನೆ “ ಆಚಾರ್ಯೋ ಲಿಂಗಮಾದಾಯ ಸಮಭ್ಯರ್ಚ್ಯ ಯಥಾವಿಧಿ। ಶಿಷ್ಯಸ್ಯಾಲೋಕನಂ ಸಮ್ಯಗಾಯತ್ತಾ ಪರಿಕೀರ್ತಿತಾ ॥ ” ಈ ಪ್ರಕಾರವಾಗಿ, ಕ್ರಿಯಾಸಾರವು “ **ಲಿಂಗಾಯತ್ತ** ” ದೀಕ್ಷೆಯ ಸ್ವರೂಪವನ್ನು ಬೋಧಿಸುತ್ತದೆ. ಇದರಲ್ಲಿ “ **ಆಯತ** ” ಎಂದು ಅದೆಯೋ ಅಥವಾ “ **ಆಯತ್ತ** ” ಎಂದು ಅದೆಯೋ ನೀನೇ ವಿಚಾರಿಸು! ಈ ಪ್ರಕಾರವಾಗಿ ಲಿಂಗಾಯತ್ತ ದೀಕ್ಷೆಯಿಂದ ಯುಕ್ತನಾದ ಶಿಷ್ಯನು “ **ಲಿಂಗಾಯತ್ತ** ” ನೆಂದು ಹೇಳಿಸಿ ಕೊಳ್ಳುವನೆಂದು ನೀನು ತೋರಿಸಿರುವ ಶ್ಲೋಕದಲ್ಲಿ ಅಭಿಪ್ರಾಯವು ಹೊರಡುವದಲ್ಲದೆ “ **ಲಿಂಗಾಯತ** ” ಎಂಬ ಮತದ ವಿಷಯದಲ್ಲಿರುವದಿಲ್ಲ; ಆದ್ದರಿಂದ ಆ ಶ್ಲೋಕವನ್ನು ಈ ಸಂದರ್ಭದಲ್ಲಿ ಉದಾಹರಿಸಿರುವದು ನಿನ್ನ ಭ್ರಾಂತಿಯಲ್ಲದೆ ಬೇರೊಂದಿಲ್ಲ; ಇರಲಿ; ಈ “ ಲಿಂಗಾಯತ ” ಶಬ್ದವು ಶಾಸ್ತ್ರೀಯಮತ ಬೋಧಕವಾಗಿದ್ದರೆ ಸಿದ್ಧಾಂತ ಶಿಖಾಮಣಿ—ಶ್ರೀಕರಭಾಷ್ಯ—ಶಿವಾದ್ವೈತಮಂಜರೀ— ಲಿಂಗಧಾರಣ ಚಂದ್ರಿಕಾ— ಕ್ರಿಯಾಸಾರ— ಅನುಭವಸೂತ್ರ— ಶಿವತತ್ವರತ್ನಾಕರ ಮೊದಲಾದ ಅಸಂಖ್ಯ ಧರ್ಮಗ್ರಂಥಗಳಲ್ಲಿಯೂ ಹಾಗೂ ಶಿವಾಗಮಗಳಲ್ಲಿಯೂ ದೊರೆಯಬೇಕಾಗುತ್ತಿತ್ತು; ಹಾಗೆ ದೊರೆಯುವದಿಲ್ಲವಾದ ಕಾರಣ ಈ “ ಲಿಂಗಾಯತ ” ಶಬ್ದವು ಅನ್ಯಭಾಷಾಮಿಶ್ರಿತ ಶಬ್ದವೆಂದೇ ಹೇಳಬೇಕಾಗುತ್ತದೆ. ನೀನು ಈ ಶಬ್ದದ ಬಗ್ಗೆ ಉತ್ತರವನ್ನು ಬರೆಯುವ ಸಮಯದಲ್ಲಿ ಅಪ್ರಾಸಂಗಿಕಗಳಾದ ಶ್ಲೋಕಗಳನ್ನು ಬರೆದು ಸುಮ್ಮನೆ ಹರಟೆಯನ್ನು ಕೊಚ್ಚಿರುವಿ! ಹೀಗೆ ಬರೆಯುವದು ಸದುತ್ತರದ ಲಕ್ಷಣವಲ್ಲ. !

( ಶಿ—ಉ—ವಿ. ) ಲಿಂಗಾಯತ ಶಬ್ದವು **ಬಾಗಾಯತ— ಪಂಚಾಯತ** ಶಬ್ದಗಳಂತಿರದೆ ದೀಕ್ಷಾಯತ ಮುಂತಾದ ಸಂಸ್ಕೃತ ಶಬ್ದಗಳಂತಿರುವದೆಂದು ಬರೆದಿರುವಿ;

ಆದರೆ ಈ " ದೀಕ್ಷಾಯುತ " ಎಂಬ ಶಬ್ದದ ವ್ಯುತ್ಪತ್ತಿಯನ್ನೂ ಹಾಗೂ ಈ ಶಬ್ದ ಪ್ರಯೋಗಗಳನ್ನು ಯಾವ ಯಾವ ಪ್ರಾಚೀನ ಪ್ರಾಮಾಣಿಕ ಪಂಡಿತರು ತಮ್ಮ ತಮ್ಮ ಗ್ರಂಥಗಳಲ್ಲಿ ಉಲ್ಲೇಖ ಮಾಡಿರುವರೆನ್ನುವದನ್ನೂ ತೋರಿಸಿದ್ದರೆ ನೆಟ್ಟಗಾಗುತ್ತಿತ್ತು; ಹಾಗೆ ತೋರಿಸಿಲ್ಲವಾದ ಕಾರಣ ನಂಬತಕ್ಕದ್ದಾಗಿರುವದಿಲ್ಲ. ದೀಕ್ಷಾಶಬ್ದವು " ದೀಕ್ಷಿತ " ಹಾಗೂ " ದೀಕ್ಷಾಯಿತ " ಎಂದು ರೂಪಾಂತರವನ್ನು ಹೊಂದುವದಲ್ಲದೆ "ದೀಕ್ಷಾಯುತ " ಎಂದು ಆಗುವದಿಲ್ಲ. ಆದ್ದರಿಂದ ಲಿಂಗಾಯುತ ಶಬ್ದದಬಗ್ಗೆ ಈ ಶಬ್ದದ ದೃಷ್ಟಾಂತವನ್ನು ಕೊಟ್ಟಿರುವದು ಕೇವಲ ಅಸಂಗತವು! " ಆಯುತ " ಎಂಬ ಶಬ್ದವು ಅರಬ್ಬೀ ಭಾಷೆಯದಿದ್ದು ಅದರ ಅರ್ಥವು " ಗುರುತು " ಎಂದಾಗುತ್ತದೆ. ಅರಬ್ಬೀ ಭಾಷೆಯ ಕೋಶವನ್ನು ನೋಡು; ಹಾಗೂ ಮುಸಲ್ಮಾನರ ಧರ್ಮ ಗ್ರಂಥವಾದ ಕುರಾನೆ ಷರೀಫದಲ್ಲಿ ಒಂದೊಂದು ವಾಕ್ಯದ ಗುರುತಿಗೆ " ಆಯುತ " ಎನ್ನುತ್ತಾರೆ. ಆದ್ದರಿಂದ ಲಿಂಗಾಯತ ಮತವೆಂದರೆ ಲಿಂಗದ ಗುರುತುಳ್ಳ ಮತವೆಂದು ಅರ್ಥವಾಗುವದಲ್ಲದೆ ಬೇರೊಂದಾಗುವದಿಲ್ಲವೆಂದು ಚನ್ನಾಗಿ ತಿಳಿ!

( ೬-ಉ-ವಿ. ) ಮೇಲಿನ ಉತ್ತರವನ್ನು ನೋಡೆಂದು ಬರೆದಿರುವಿ; ನೀನಾದರೂ ಮೇಲಿನ ವಿಮರ್ಶವನ್ನು ನೋಡು.

( ೭-ಉ-ವಿ. ) ಲಿಂಗಾಯತ ಶಬ್ದ ವಿಚಾರವನ್ನು ೨-೩-೪-೫ ನೆಯ ವಿಮರ್ಶಗಳಲ್ಲಿ ನೋಡು. ವೇದಾಂತಸಾರ ವೀರಶೈವ ಚಿಂತಾಮಣಿಯ ದೀಕ್ಷಾ ಪ್ರಕರಣದಲ್ಲಿ " ಲಿಂಗಾಯುತ " ಎಂಬ ದೀಕ್ಷೆಯು ಹೇಳಲ್ಪಟ್ಟಿರುವದೆಂದು ಬರೆದಿರುವಿ; ಆದರೆ ಅದು " ಲಿಂಗಾಯುತ " ದೀಕ್ಷೆಯಾಗಿರದೆ " ಲಿಂಗಾಯುತ್ತ ದೀಕ್ಷೆ " ಯಾಗಿರುವದು. ಸಾವಿರಾರು ಗ್ರಂಥಕಾರರು " ಲಿಂಗಾಯುತ್ತ-ಲಿಂಗಸ್ವಾಯುತ್ತ " ಎಂಬೀದೀಕ್ಷಾ ಪ್ರಭೇಧಗಳನ್ನು ತೋರಿಸಿದ್ದರೂ ಅದನ್ನು ತಿಳಿಯದೆ " ಲಿಂಗಾಯತ-ಲಿಂಗಾಯುತ " ಎಂದು ಬಡಬಡಿಸುವದು ನಿನ್ನ ಮೂಢತ್ವವಲ್ಲದೆ ಬೇರೊಂದಿಲ್ಲ!

( ೮-೯-೧೦-ಉ-ವಿ. ) ಆಗಮಗಳಲ್ಲಿ ಪರಶಿವನು ವೀರಶೈವ ಮತದ ಬಗ್ಗೆ " ಮೇಮತಂ ಮಮಮತಂ " ಎಂದು ಅಂದಿರುವನೆಂದು ಕೆಲವು ಶ್ಲೋಕಗಳನ್ನು ಉದಾಹರಿಸಿ, ಇದರಿಂದ ವೀರಶೈವ ಮತಕ್ಕೆ ಪರಶಿವನೇ ಮೂಲ ಪುರುಷನೆಂದು ಬರೆದಿರುವಿಯಷ್ಟೆ! ಪರಶಿವನು ನನ್ನ ಮತವೆಂದು ಹೇಳಿದ ಮಾತ್ರಕ್ಕೆ ಅವನು ಈ ಮತಕ್ಕೆ ಮೂಲ ಪುರುಷನಾಗಲಾರನು; ಪರಶಿವನು ವೀರಶೈವ ಮತಕ್ಕೆ ನನ್ನಮತವೆಂದು ಹೇಳಿದಂತೆ ಶೈವ ಮತಕ್ಕಾದರೂ " ಅಥವಕ್ಷ್ಯೇಗಿರಿಸು ತೇಮತಂಮಮ ಮಹತ್ತರಂ| ಶೈವಂಸಪ್ತ ವಿಧಂ ಪುಣ್ಯಂ ವೀರಶೈವಾದಿಭೇದತಃ || ೧೩ || ಸೌಗತಾದೀನಿಯಾವಂತಿ ವೇಷವಾಂತಮತಾ

ನಿತು | ಯಚ್ಚಶೈವಂಮಮಮತಂ ಸರ್ವೇಷಾ ಮುತ್ತಮೋತ್ತಮಂ ||೧೭|| ಪಾರಮೇಶ್ವ ರಾಗಮ ೧ ನೇಯ ಪಟಲ | ಇತ್ಯಾದ್ಯನೇಕ ಶ್ಲೋಕಗಳಿಂದ " ಮಮಮತಂ—ಮ ಮಮತಂ " ಎಂದು ಸ್ಪಷ್ಟವಾಗಿ ಹೇಳಿದ್ದಾನೆ. ಇದನ್ನೆಲ್ಲ ಕಣ್ದೆರದು ನೋಡದೆ ಕೂಪ ಮಂಡೂಕದಂತೆ ಉಚ್ಚರಿಸುವದು ಹಾಸ್ಯಾಸ್ಪದವಲ್ಲವೇ? ಪರಶಿವನು ಒಂದು ಮತಕ್ಕೇಕೆ ಸಮಸ್ತ ಪ್ರಪಂಚಕ್ಕೆ ಮೂಲಕಾರಣೀ ಭೂತನಾಗಿದ್ದಾನೆ. ಈ ವಿಷಯವು ಸರ್ವರಿಗೂ ಗೊತ್ತಿದ್ದೇ ಆದೆ ಅಸ್ತು! ಒಬ್ಬ ಪರಶಿವನಲ್ಲೇಕೆ? ಪ್ರತಿಯೊಂದು ಪ್ರಾಣಿಯಲ್ಲಿಯೂ ಕೂಡ " ನನ್ನದು—ನನ್ನದು " ಎಂಬ ವ್ಯವಹಾರವಿರುತ್ತದೆ. ಈ ವ್ಯವಹಾರವು ಕೇವಲ ಪ್ರೇಮಾತಿಶಯವನ್ನು ತೋರಿಸುವದಲ್ಲದೆ ಮೂಲ ಪುರುಷತ್ವವನ್ನು ಸೂಚಿಸುವ ದಕ್ಕಿರುವದಿಲ್ಲ; ಮತದ ಮೂಲಪುರುಷರೆಂದರೆ ಮತಸ್ಥಾಪಕರಾಗುತ್ತಾರೆ. ಆರ್ಯಸ ಮಾಜದ ಮೂಲಪುರುಷನೆಂದರೆ ದಯಾನಂದನೆಂದೇ ಹೇಳಬೇಕಾಗುತ್ತದೆ. ಯಾಕಂದ ರೆ ಆಮತವನ್ನು ಅವನು ಸ್ಥಾಪಿಸಿದ್ದಾನೆ. ಆದರಂತೆ ವೀರಶೈವ ಮತಕ್ಕೆ ಆ ಮತಸ್ಥಾ ಪಕರಾದ ಶ್ರೀಜಗದ್ಗುರು ಪಂಚಾಚಾರ್ಯರೇ ಮೂಲ ಪುರುಷರೆಂದು ತಿಳಿಯಬೇಕು. ಇವರೇ ಈ ಪವಿತ್ರ ಮತಸ್ಥಾಪಕರೆಂಬ ವಿಷಯವನ್ನು ಶಿವಾಗಮಾದಿಗಳು ಸಾರುವಂತೆ ನೀನಾದರೂ ನಿನ್ನ ಉತ್ತರದಲ್ಲಿಯೇ ಒಪ್ಪಿಕೊಂಡಿರುವಿ; ಆದ್ದರಿಂದ ಇವರೇ ಮೂಲ ಪುರು ಷರೆಂದು ದೃಢವಾಗಿನಂಬು! ಬಸವ—ಅಲ್ಲಮಾದಿಗಳು ಈ ಮತಸ್ಥಾಪನಾಚಾರ್ಯರ ತತ್ವಕ್ಕೆ ಕೇವಲ ವಿರೋಧಿಗಳಿದ್ದದರಿಂದ ಈ ಪವಿತ್ರ ಮತದ ವಿಷಯದಲ್ಲಿ ಅವರ ಸಂಬಂಧವನ್ನು ತೋರಿಸುವದು ಭ್ರಾಂತಿಯೇ ಸರಿ!

(೧೨— ಉ—ವಿ.) ಅಸ್ಪೃಶ್ಯ ವರ್ಗದಲ್ಲಿರುವ ಕೆಲವರಿಗೆ " ಬಾಲಬಸವ " ರೆಂಬ ಹೆಸರು ಯಾಕೆ ಬಂದಿರುವದೆಂದು ಪ್ರಶ್ನೆ ಮಾಡಿದ್ದಕ್ಕೆ ಆ ಅಸ್ಪೃಶ್ಯರು ಶಿವಪ್ಪ—ಶಂಕ ರಪ್ಪ ಎಂಬ ಹೆಸರುಗಳನ್ನು ಹೇಗೆ ಇಟ್ಟುಕೊಳ್ಳುವರೋ ಆದರಂತೆ ಬಸವನಲ್ಲಿರುವ ಭಕ್ತಿ ಯಿಂದ " ಬಾಲಬಸವ " ಎಂಬ ಹೆಸರನ್ನಿಟ್ಟುಕೊಂಡಿರುವರೆಂದು ಬರೆದಿರುವಿ; ವ್ಯಕ್ತಿ ಮಾತ್ರದಿಂದ ಯಾವ ಹೆಸರನ್ನಾದರೂ ಇಡಬಹುದು! ಆದರೆ ಇದು ವ್ಯಕ್ತಿ ಮಾತ್ರದ ಹೆಸರಲ್ಲ! " ಬಾಲಬಸವ " ಎಂಬುದೊಂದು ಪಂಗಡವದೆ. ಆದಕಾರಣ ನೀನು ಕೊ ಟ್ಟಿರುವ ದೃಷ್ಟಾಂತವು ಕೇವಲ ವಿಷಮವಾಗಿರುತ್ತದೆ. ಬಸವನು ಸರ್ವೋತ್ತಮ ವರ್ಣಾ ಶ್ರಮಗಳನ್ನು ಧಿಕ್ಕರಿಸಿ ಕೇವಲ ಅಸ್ಪೃಶ್ಯ ಜನರಲ್ಲಿ ವಿಶ್ವಾಸವಿಟ್ಟು ವಿಶೇಷವಾಗಿ ಅವರ ಸಂಬಂಧವನ್ನು ಬೆಳಿಸಿಕೊಂಡ ಕಾರಣ ಆಜನರಾದರೂ ಇವನಲ್ಲಿ ಅಸಾಧಾರಣವಾದ ವಿಶ್ವಾ ಸವನ್ನಿಟ್ಟು ತಮ್ಮ ಪಂಗಡಕ್ಕೆ ಇವನ ಹೆಸರನ್ನಿಟ್ಟು ಕೊಂಡು " ಬಾಲಬಸವ " ರೆಂಬ ಹೆಸರಿನಿಂದ ಪ್ರಸಿದ್ಧರಾಗಿದ್ದಾರೆಂದು ತೋರುತ್ತದೆ.

(೧೩-೧೪-೧೫-ಉ-ವಿ.) ಆದಿಯಲ್ಲಿ ಬಸವನು ಯಾವ ಮತದವನೆಂದು ಕೇಳಿದ

ಪ್ರಶ್ನಕ್ಕೆ—ಇವನು ಆದಿಯಲ್ಲಿ ವೀರಶೈವ ಮತದವನೆಂದು ೧೫ನೆಯ ಉತ್ತರದಲ್ಲಿ ಬರೆದಿರುವಿ. ೧೪ನೆಯ ಉತ್ತರದಲ್ಲಿ ಸ್ಥಾವರ ಸಂದಿವ್ರತವನ್ನು ಮಾಡಿದ ಇವನತಾಯಿಯಾದ ಮಾದಾಂಬಿಕೆಯು ಇತರ ಮತದವಳೆಂದು ಅಭಿಪ್ರಾಯಪಟ್ಟಿರುವಿ; ಇಂಥ ಅನ್ಯಮತದವಳ ಉದರದಿಂದ ವೀರಶೈವನಾದ ಬಸವನು ಹೇಗೆಜನಿಸಿದನು? ೪೨-೪೩ನೆಯ ಪ್ರಶ್ನೆಗಳ ಉತ್ತರದಲ್ಲಿ ಬಸವನ ಸೋದರಮಾವನಾದ ಬಲದೇವನು ವೀರಶೈವನಿದ್ದನೆಂದು ಬರೆದಿರುವಿ; ಈ ಬಲದೇವನ ತಂಗಿಯೇ ಬಸವನ ತಾಯಿಯು! ಬಲದೇವನು ವೀರಶೈವನಿದ್ದಮೇಲೆ ಅವನ ತಂಗಿಯು ವೀರಶೈವಳಾಗಲಿಲ್ಲವೇ? ಹೀಗೆ ಪೂರ್ವಾಪರ ಪರಿಜ್ಞಾನವಿಲ್ಲದೆ ಬರೆಯುವ ನೀನು ಪಿಶಾಚಗ್ರಸ್ತನೇಸರಿ! ೧೩ನೆಯ ಪ್ರಶ್ನದಲ್ಲಿ ಬಸವನುಸ್ಮಾರ್ತನೋ ಅಥವಾ ಆರಾಧ್ಯನೋ? ಎಂದು ಕೇಳಿದ್ದಕ್ಕೆ—ಈ ವಿಷಯದಲ್ಲಿ ಗ್ರಂಥಪ್ರಮಾಣಗಳನ್ನು ಕೊಟ್ಟಿಲ್ಲವಾದ್ದರಿಂದ ಇದಕ್ಕೆ ಉತ್ತರವನ್ನು ಬರೆಯುವದಿಲ್ಲವೆಂದು ಬರೆದು ೧೪ನೆಯ ಉತ್ತರದಲ್ಲಿ ಬಸವನು ಸ್ಮಾರ್ತನೂ ಅಲ್ಲ ಹಾಗೂ ಆರಾಧ್ಯನೂ ಅಲ್ಲವೆಂದು ಉತ್ತರವನ್ನು ಬರೆದಿರುವಿ. ಹೀಗೆ ಎಚ್ಚರದಪ್ಪಿ ಬರೆಯುವನಿನಗೆ ಹುಚ್ಚನೆನ್ನುವದರಲ್ಲೇನು ಸಂದೇಹವು?

(೧೫-ಉ-ವಿ.) ಪ್ರಮಥಪುಂಗವನಾದ ಶ್ರೀ ನಂದೀಶ್ವರನೇ ಬಸವನಾಗಿಬಂದ ಪಕ್ಷದಲ್ಲಿ ಪುನಃ ಅವನಿಗೆ ಲಿಂಗಧಾರಣವೇಕೆ? ಎಂದು ಪ್ರಶ್ನ ಮಾಡಿದ್ದಕ್ಕೆ—ಮಹಾಪಂಡಿತನಾದ ನೀನು "ಯದ್ಯದಾಚರತಿ ಶ್ರೇಷ್ಠಸ್ತತ್ತ ದೇವೇತರೋಜನಃ,, ಎಂಬ ವಾಕ್ಯವನ್ನುದಾಹರಿಸಿ ಶ್ರೇಷ್ಠರು ಯಾವ ಕರ್ಮವನ್ನಾಚರಿಸುವರೋ ಅದನ್ನೇ ಇತರರು ಆಚರಿಸುವರಾದಕಾರಣ ಬಸವನು ತಾನುಆದಿಯಲ್ಲಿ ಲಿಂಗಧಾರಣವನ್ನು ಮಾಡಿಸಿಕೊಂಡರೆ ಅದನ್ನು ಕಂಡು ಉಳಿದವರೆಲ್ಲರು ಲಿಂಗಧಾರಣವನ್ನು ಮಾಡಿಸಿಕೊಳ್ಳುವರೆಂಬ ಬುದ್ಧಿಯಿಂದ ಲಿಂಗಧಾರಣ ಶೂನ್ಯನಂತೆ ನಟಿಸಿ ಲಿಂಗಧಾರಣವನ್ನು ಮಾಡಿಸಿಕೊಂಡನೆಂದು ಬರೆದಿರುವಿ; ಅಹಾ! ಏನಿದು ನಿನ್ನ ಬುದ್ಧಿಯಪ್ರಭಾವವು? ಜಗತ್ಪ್ರಸಿದ್ಧನಾದ ಎಡಿಸನ್ನನ ಬುದ್ಧಿಯು ನಿನ್ನಬುದ್ಧಿಯ ಮುಂದೆ ನಿವಾಳಿಯೇಸರಿ! ಲೇಖಕನೇ—ನಿನ್ನ ಬರವಣಿಗೆಯ ಮೇಲಿಂದ ಬಸವನು ಲಿಂಗಧಾರಣವನ್ನು ಮಾಡಿಸಿಕೊಳ್ಳುವದಕ್ಕಿಂತ ಪೂರ್ವದಲ್ಲಿ ಯಾರೂ ಲಿಂಗವನ್ನು ಧರಿಸಿಕೊಳ್ಳುತ್ತಿದ್ದಿಲ್ಲವೆಂದೂ, ಲಿಂಗಧಾರಣದ ವಿಷಯದಲ್ಲಿ ಈ ಬಸವನೇ ಪ್ರಥಮ ಮಾರ್ಗದರ್ಶಕನಾದನೆಂದೂ ಸ್ಪಷ್ಟವಾಗಿ ತೋರುತ್ತದೆ. ಬಸವನು ನಂದೀಶ್ವರನ ಅವತಾರಿಯೆಂದು ಸಾಧಿಸುವದಕ್ಕೋಸ್ಕರ ಎಂಥ ದುರ್ಮಾರ್ಗವನ್ನು ಹಿಡಿದಿರುವಿಯಲ್ಲ। ಶಾಂತಿಃ! ಯಾವತ್ತುಜನರಿಗೆ ಲಿಂಗಧಾರಣ ಮಾರ್ಗದರ್ಶಕನಾದ ಈ ಬಸವನು ೮ನೆಯ ವರ್ಷದಲ್ಲಿ ತಾನು ದೀಕ್ಷೆಯನ್ನು ಮಾಡಿಸಿಕೊಂಡು ಸರ್ವರಿಗೂ ದೀಕ್ಷಾಮಾರ್ಗವನ್ನು ತೋರಿಸಬಹುದಾಗಿತ್ತಲ್ಲವೇ? ಹೀಗೆ ತೋರಿಸಿದನೋ? ತೋರಿಸಿದನೆಂದರೆ ೪೯ನೆಯ ಉತ್ತರದಲ್ಲಿ ಬಸವನಿಗೆ ೮ನೆಯವರ್ಷದಲ್ಲಿ ದೀಕ್ಷೆಯಾಗಿದ್ದಿಲ್ಲವೆಂದು ನೀನೆ ಬರೆದಿರುವಿ

ಬಸವನು ೮ ನೆಯ ವರ್ಷದಲ್ಲಿ ದೀಕ್ಷೆಯನ್ನು ಮಾಡಿಸಿಕೊಳ್ಳಲಿಲ್ಲವೆಂದ ಮೇಲೆ ಅವನ ಮಾರ್ಗಾವಲಂಬಿಗಳಾದರೂ ೮ನೆಯ ವರ್ಷದ ದೀಕ್ಷೆಯನ್ನು ದೂರೀಕರಿಸಿ ಜನನಕಾಲದ ಲಿಂಗಧಾರಣ ಮಾತ್ರದಿಂದಿರುವದೇ ಶ್ರೆಯಸ್ಕರವಲ್ಲವೇ? ಹೀಗೆ ಹಿಂದೆಯೂ ಮುಂದೆಯೂ ವಿಚಾರ ಮಾಡದೆ ಮನಸ್ಸಿಗೆಬಂದಂತೆ ಬರೆದಿರುವ ನಿನ್ನ ಮುಸಲಾಗ್ರ ಬುದ್ಧಿಯ ಪ್ರಭಾವ ವನ್ನು ವರ್ಣಿಸಲಸದಳವಾಗಿದೆ.

(೧೬–ಉ–ವಿ) ಶ್ರೀ ನಂದೀಶ್ವರನು ಲಿಂಗಧಾರಣಶೂನ್ಯನಾಗಿ ಜನಿಸಿದನೆಂದರೆ ಅವನಲ್ಲಿ ಪ್ರಮಥತ್ವವು ಹೇಗೆ ಸಂಭವಿಸುವದು ? ಎಂದು ಪ್ರಶ್ನೆಮಾಡಿದ್ದಕ್ಕೆ ಪರಮಾತ್ಮನ ಕಿರಾತ ದೃಷ್ಟಾಂತವನ್ನು ಕೊಟ್ಟಿರುವಿ. ಲೇಖಕನೇ-ಪರಮಾತ್ಮನು ಒಂದುಕಿರಾತ ರೂಪಿಯೇಕೆ ವಿಶ್ವರೂಪಿಯಾಗಿದ್ದಾನೆ. ಈ ವಿಷಯವಲ್ಲಿ " ನಮೋ ಮೃಗಯುಭ್ಯಃ ಶ್ವನಿಭ್ಯಶ್ಚ ವೋ ನಮೋ ನಮಃ ಶ್ವಭ್ಯಃ ಶ್ವಪತಿಭ್ಯಶ್ಚ ವೋ ನಮಃ ,, ಇತ್ಯಾದಿ ಶ್ರೀ ರುದ್ರ ಪಠಿತ ವಾಕ್ಯಗಳನ್ನು ನೋಡು. ಶಿವನು ಯಾವರೂಪದಲ್ಲಿದ್ದಾಗ್ಯೂ ಅವನಲ್ಲಿ ಶಿವತ್ವವು ಇದ್ದೇಇರುವದು. ಅದರಂತೆ ಪ್ರಮಥತ್ವವಾದರೂ ಇರುವದೆಂಬ ಪಕ್ಷದಲ್ಲಿ ಪ್ರಮಥರು ಲಿಂಗಧಾರಣ ಶೂನ್ಯರಾದರೂ ಆಗಬಹುದು ! ಹಾಗೂ ಲಿಂಗಧಾರಣ ವಿಶಿಷ್ಟರಾದರೂ ಆಗಬಹುದು ! ಎಂದು ಹೇಳಿದಂತಾಯಿತು. ಪ್ರಮಥರ ವಿಷಯದಲ್ಲಿ ಈ ಪ್ರಕಾರವಾಗಿ ಸ್ವಸಿದ್ಧಾಂಗೊಳಿಸುವ ನೀನು ಯಾವ ಪ್ರೌಢ ಗುರುವನ್ನಾಶ್ರಯಿಸಿರುವಿಯೋ ತಿಳಿಯದು ! ನೀನೇ-ಧನ್ಯ ! ಧನ್ಯ ! !

(೧೭–ಉ–ವಿ.) ೧೬ನೆಯ ಉತ್ತರವನ್ನು ನೋಡೆಂದು ಬರೆದಿರುವಿ. ನೀನಾದರೂ ೧೬ನೆಯ ವಿಮರ್ಶವನ್ನು ನೋಡು !

(೧೮–ಉ–ವಿ) ಸಂಗಮೇಶ್ವರನು ಪರಮಾತ್ಮನೋ ಅಥವಾ ಅನ್ಯನೋ ? ಎಂದು ಪ್ರಶ್ನೆ ಮಾಡಿದ್ದಕ್ಕೆ ಸಂಗಮೇಶ್ವರನು ಪರಮಾತ್ಮನೆಂದು ಬರೆದಿರುವಿ. ಈ ವಿಷಯದಲ್ಲಿ ನೀನು ಉದಾಹರಿಸಿರುವ " ಸಂಗಮೇಶ್ವರ ರೂಪೇಣ ಭವಿಷ್ಯಾಮಿಗುರುಸ್ತವ|| ,, ಎಂಬೀವಾಕ್ಯದಿಂದ ಪರಮಾತ್ಮನು ಸಂಗಮೇಶ್ವರನೆಂಬ ಗುರುಸ್ವರೂಪದಿಂದ ದೀಕ್ಷೆಯನ್ನು ಮಾಡಿದನೆಂದು ಸಿದ್ಧವಾಗುತ್ತದೆ. ಇದರಿಂದ ಪರಮಾತ್ಮಸ್ವರೂಪಕ್ಕಿಂತ ಗುರು ಸ್ವರೂಪವು ಭಿನ್ನವಾಗಿರುವದೆಂದೂ, ಗುರುಸ್ವರೂಪಕ್ಕಿಂತ ಪರಮಾತ್ಮ ಸ್ವರೂಪವು ಭಿನ್ನವಾಗಿರುವದೆಂದೂ ಸ್ಪಷ್ಟವಾಗುತ್ತದೆ. ಹೀಗಿದ್ದು ಸಂಗಮೇಶ್ವರನಿಗೆ ಪರಮಾತ್ಮನೆಂದೇ ಹೇಳುತ್ತೇವೆನ್ನುವದು ಸಮಂಜಸವಾಗುವದಿಲ್ಲ. ಹಾಗೂ ನೀನು ಉದಾಹರಿಸಿದ " ಲಲಾಟಲೋಚನಂ ಚಾಂದ್ರೀಂ ಕಲಾಮಪಿಚ ದೋರ್ದ್ವಯಂ| ಅಂತರ್ನಿಧಾಯ ವರ್ತೇಹಂ ಗುರುರೂಪೋ ಮಹೇಶ್ವರಿ || ಎಂಬೀ ಪ್ರಮಾಣದಿಂದ ಚಂದ್ರಕಲಾ ಲಲಾಟಲೋಚ

ನಾದಿ ವಿಶಿಷ್ಟ ಪರಮಾತ್ಮ ಸ್ವರೂಪಕ್ಕಿಂತ ತದ್ಭಿನ್ನಕರ್ತೃ ಗುರುಸ್ವರೂಪವು ಭಿನ್ನವೆಂದು ಸ್ಪಷ್ಟವಾಗುವದಿಲ್ಲವೇ ? ಹೀಗಿದ್ದಾಗ್ಯೂ ಸಂಗಮೇಶ್ವರನೆಂಬ ಗುರುವಿಗೆ ಪರಮಾತ್ಮನೆಂದು ಹೇಳುವ ನಿನ್ನ ಬುದ್ಧಿಗೆ ಬೆಲೆಯಿಲ್ಲ ! ಪರಮಾತ್ಮ ಸ್ವರೂಪನಾದ ಸಂಗಮೇಶ್ವರನೆಂಬ ಗುರುವಿಗೂ ಪರಮಾತ್ಮನಿಗೂ ಅಭೇದವನ್ನು ಹೇಳುತ್ತೀವೆಂದರೆ “ ಸರ್ವಂ ಶಿವಮಯಂ ಪಶ್ಯೇದನ್ಯಭಾವೋನವಿದ್ಯತೇ || ,, ಎಂಬ ಪ್ರಮಾಣಾನುಸಾರವಾಗಿ ಸಮಸ್ತ ಪ್ರಪಂಚ ವನ್ನು ಶಿವನಿಗೆ ಅಭಿನ್ನವನ್ನಾಗಿ ಹೇಳಬೇಕಾಗುತ್ತದೆ. ಇದರಲ್ಲೇನಾಶ್ಚರ್ಯವು ?

(೧೯—ಉ—ವಿ.) ಸಂಗಮೇಶ್ವರನೇ ಪರಮಾತ್ಮನೆಂದ ಪಕ್ಷದಲ್ಲಿ ತನ್ನಿಂದುಕ್ತಗ ಳಾದ ಶಿವಾಗಮಗಳಲ್ಲಿ ಗುರುವಂಶೀಯರಿಂದ ಲಿಂಗಧಾರಣವನ್ನು ಮಾಡಿಸಿಕೊಳ್ಳಬೇ ಕೆಂದುಬೋಧಿಸಿ ತದ್ವಿರುದ್ಧವಾಗಿ ತಾನೇ ಹೇಗೆ ಲಿಂಗಧಾರಣವನ್ನು ಮಾಡಿದನು ? ಎಂದು ಪ್ರಶ್ನೆ ಮಾಡಿದ್ದಕ್ಕೆ— “ ಸೇಯಂದೀಕ್ಷಾದ್ವಿಧಾಭಿನ್ನಾ ಸಾಧಾರಾಧಾರವರ್ಜಿತಾ | ಆಚಾ ರ್ಯಮಂತ್ರರೇಣೈವ ಕ್ರಿಯತೇಶಂಕರೇಣಯಾ || ತೀವ್ರಶಕ್ತಿ ನಿಪಾತೇನ ದೀಕ್ಷಾಸಾಧಾ ರವರ್ಜಿತಾ | ಗುರುಮೂರ್ತಿಂಸಮಾಶ್ರಿತ್ಯ ಮಂದಶಕ್ತಿ ನಿಪಾತನಾತ್ | ಕುರುತೇ ಸಕಲ ಸ್ಯೇಶಃ ಸಾಧಾರಾಂತಾಮಿಮಾಂ ವಿದುಃ || ,, ಎಂಬೀ ಕ್ರಿಯಾಸಾರ ಶ್ಲೋಕಗಳನ್ನುದಾ ಹರಿಸಿ ಪರಮಾತ್ಮನಿಗೆ ದೀಕ್ಷಾಧಿಕಾರವಿರುವದೆಂದು ತೋರಿಸಿರುವಿ. ಈ ಶ್ಲೋಕಗಳಿಂದ ದೀಕ್ಷೆಯು ಸಾಧಿಕರಣ—ನಿರಧಿಕರಣ ಭೇದದಿಂದ ಎರಡು ಪ್ರಕಾರವಾಗಿರುವದೆಂ ತಲ್ಲೂ, ಪರಮಾತ್ಮನು ಯಾವ ದೀಕ್ಷೆಯನ್ನು ತಾನೇ ಮಾಡುವನೋ ಅದೇ ನಿರಧಿಕರ ಣದೀಕ್ಷೆಯೆಂತಲೂ, ಆ ಪರಮಾತ್ಮನೇ ಗುರುರೂಪವನ್ನುಧರಿಸಿ ಮಾಡಿದ್ದಾದರೆ ಅದೇ ಸಾಧಿಕರಣದೀಕ್ಷೆ ಯೆಂತಲೂ, ಸ್ಪಷ್ಟವಾಗಿ ತೋರುತ್ತದೆ. ಆದರೆ ಪರಮಾತ್ಮನು ಬಸವನಿಗೆ ಹುಟ್ಟಿದ ಕೂಡಲೆ ನಿರಧಿಕರಣ ದೀಕ್ಷೆಯನ್ನು ಮಾಡಿದನೆಂದು ಬರೆದಿರುವಿ. ||
೧೮ನೆಯ ಉತ್ತರದಲ್ಲಿ “ ಸಂಗಮೇಶ್ವರರೂಪೇಣ ಭವಿಷ್ಯಾಮಿ ಗುರುಸ್ತವ || ,, ಎಂಬ ಬಸವ ಪುರಾಣದ ಶ್ಲೋಕವನ್ನು ಉದಾಹರಿಸಿರುವಿ. ಇದರಮೇಲಿಂದ ಪರಮಾತ್ಮನು ಸಂಗಮೇಶ್ವರನೆಂಬ ಹೆಸರಿನಿಂದ ಗುರುವಾಗಿ ಬಂದು ದೀಕ್ಷೆಯನ್ನು ಮಾಡಿದನೆಂದು ಸಿದ್ಧ ವಾಗುತ್ತದೆ. ಆದರೆ ಮೇಲಿನ ಕ್ರಿಯಾಸಾರ ಪ್ರಮಾಣಾನುಸಾರವಾಗಿ ಪರಮಾತ್ಮನು ತಾನೇ ಗುರುವಾಗಿ ದೀಕ್ಷೆಯನ್ನು ಮಾಡಿದರೆ ಸಾಧಿಕರಣ ದೀಕ್ಷೆಯನ್ನು ಮಾಡಿದಂ ತಾಗುವದೆಂದು ಸಿದ್ಧವಾಗುತ್ತದೆ. ಹೀಗಿದ್ದು ನೀನು ಕೊಟ್ಟ ಶ್ಲೋಕಗಳ ಅರ್ಥವನ್ನು ಸಹ ತಿಳಿಯದೆ ಪರಮಾತ್ಮನು ಬಸವನಿಗೆ ನಿರಧಿಕರಣ ದೀಕ್ಷೆಯನ್ನು ಮಾಡಿದನೆಂದು ಬರೆದದ್ದನ್ನು ನೋಡಿದರೆ ಮಹಾಮೂರ್ಖರೂಕೂಡ ನಗುವಂತಿರುತ್ತದೆ. ಈ ವಿಚಾರದ ಮೇಲಿಂದ ಬಸವನಿಗೆ ನಿರಧಿಕರಣ ದೀಕ್ಷೆಯಾಗಿದ್ದಿಲ್ಲವೆಂದು ಸಿದ್ಧವಾದಮೇಲೆ ಇವನಲ್ಲಿಯ ಪ್ರಮಥತ್ವವು ಪಲಾಯನ ಸೂಕ್ತವನ್ನು ಪಠಿಸಿದಂತಾಗಲಿಲ್ಲವೇ ?

( ೨೦-ಉ-ವಿ. ) ಸಂಗಮೇಶ್ವರನು ಪರಮಾತ್ಮನೋ ಅಥವಾ ತದ್ಭಿನ್ನನಾದ ಗುರುವೋ ಎನ್ನುವದನ್ನು ೧೮ ನೆಯ ವಿಮರ್ಶದಲ್ಲಿ ನೋಡು !

( ೨೧-೨೨-೨೩-ಉ-ವಿ ) ೮ ನೆಯ ತಿಂಗಳಲ್ಲಿ ಮಾದಾಂಬಿಕೆಯ ಗರ್ಭಕ್ಕೆ ಲಿಂಗಧಾರಣವಾಗಿತ್ತೋ ಇಲ್ಲವೋ ? ಎಂದು ಪ್ರಶ್ನೆ ಮಾಡಿದ್ದಕ್ಕೆ-ಗರ್ಭಕ್ಕೆ ಲಿಂಗಧಾರಣ ವಾಗಿದ್ದಿಲ್ಲವೆಂದೂ ಹುಟ್ಟಿದಮೇಲೆ ಆಯಿತೆಂದೂ ಉತ್ತರವನ್ನು ಬರೆದು ಹುಟ್ಟಿದಮೇಲೆ ಲಿಂಗಧಾರಣ ಮಾಡುವವಿಷಯದಲ್ಲಿ ಪ್ರಮಾಣಗಳನ್ನು ಕೊಟ್ಟಿರುವಿ. ಆದರೆ ೮ ನೆಯ ತಿಂಗಳಲ್ಲಿ ಗರ್ಭಕ್ಕೆ ಲಿಂಗಧಾರಣವನ್ನು ಮಾಡುವದು ಸರ್ವೋತ್ತಮವಾಗಿರುತ್ತದೆ. ಯಾಕಂದರೆ ೭ನೆಯ ತಿಂಗಳವಅಂತ್ಯದಲ್ಲಿ ಗರ್ಭದಲ್ಲಿರುವ ಶಿಶುಪಿಂಡಕ್ಕೆ ಜೀವಕಲೆಯು ಪ್ರಾಪ್ತವಾಗುವದರಿಂದ ೮ ನೆಯ ತಿಂಗಳವ ಆದಿಯಲ್ಲಿಯೇ ಗುರುಮೂರ್ತಿಯು ಜೀವ ವಿಶಿಷ್ಟವಾದ ಪಿಂಡಕ್ಕೆ ಭವಿತ್ವ ನಿವಾರಣಕ್ಕಾಗಿ ಲಿಂಗಧಾರಣ ರೂಪವಾದ ಶಿವನ ಸಂಬಂಧವನ್ನು ಮಾಡುತ್ತಾನೆ. ಹಾಗೆ ಮಾಡದಿದ್ದರೆ ಆ ಶಿಶುವು ಲಿಂಗಧಾರಣ ವಾಗುವವರೆಗೆ ಭವಿಯೇ ಆಗಿರುವದು. ಅಂದಮೇಲೆ ಬಸವನ ಶಿಶುರೂಪಪಿಂಡವು ಜೀವಕಲೆಯು ಪ್ರಾಪ್ತವಾದ ಕೆಲವು ದಿನಗಳವರೆಗೆ ಭವಿಯಾಗಿತ್ತೆಂದು ಹೇಳಬೇಕಾಗುತ್ತದೆ ಆದ್ದರಿಂದ "ವೀರಶೈವ ಸ್ಥಿತಃನಾಂತು ಮಾಸಿಗರ್ಭಸ್ಥಮೇ ಗುರುಃ | ಪಂಚಸೂತ್ರಕೃತಂ ಲಿಂಗಂ ಧಾರಯೇದ್ವಿಧಿವಚ್ಛುಭಂ ||,, ಎಂಬೀ ಪ್ರಮಾಣಕ್ಕನುಸಾರವಾಗಿ ೮ ನೆಯತಿಂಗಳಲ್ಲಿಯೇ ಲಿಂಗಧಾರಣವನ್ನು ಮಾಡುವದು ಸರ್ವೋತ್ತಮವು ! ಹುಟ್ಟಿದ ಮೇಲೆ ಧಾರಣಮಾಡುವದು ಮಧ್ಯಮವಾಗಿರುತ್ತದೆ. ಜನನವಾದಮೇಲೆ ಲಿಂಗಧಾರಣ ಮಾಡುವ ಬಗ್ಗೆ ನೀನು ಕೊಟ್ಟಿರುವ ಪ್ರಮಾಣಗಳಿಂದ ಬಸವನಿಗೆ ಆಧುನಿಕ ಶಿಶುಗಳ ಲಿಂಗಧಾರಣದಂತೆ ಲಿಂಗ ಧಾರಣವಾಗಿತ್ತೆಂದು ಸ್ಪಷ್ಟವಾಗುತ್ತದೆ. ಗುರು ಮೂರ್ತಿಯು ಆದಿಯಲ್ಲಿ ಲಿಂಗವನ್ನು ಧರಿಸಬೇಕಾದರೆ "ನಮಸ್ತೇ ಪರಮೇಶಾಯ ನಮಸ್ತೇ ಪಾರ್ವತೀಪತೇ | ನಮಃ ಕೈಲಾಸ ವಾಸಾಯ ನಮಃಸಂಸಾರ ತಾರಿಣೇ|| ಶಯನಂ ಕ್ರಿಯತಾಂ ದೇವ ಯಾವದ್ದೀಕ್ಷಾವಸಾನಕಂ|| ಈ ಪ್ರಕಾರವಾಗಿ ಸ್ತುತಿಸಿ ಲಿಂಗಮೂರ್ತಿಯನ್ನು ಶಯನಾವಸ್ಥೆಯಲ್ಲಿರಿಸುತ್ತಾನೆ. ಪುನಃ ೮ ವರ್ಷದ ದೀಕ್ಷೆಯಲ್ಲಿ ಜಾಗ್ರದವಸ್ಥೆಯಲ್ಲಿ ತರುತ್ತಾನೆ. ಇದರಂತೆ ಬಸವನಿಗೆ ಲಿಂಗ ಧಾರಣವಾದಮೇಲೆ ನಿಮ್ಮ ಬಸವನ ವಿಷಯದಲ್ಲಿ ನಿರಧಿಕರಣ ಸಾಧಿಕರಣ ದೀಕ್ಷೆ ಗಳೆರಡೂ ನಿರ್ನಾಮಗಳೇ ಸರಿ !

( ೨೪-೨೫-೨೬-ಉ-ವಿ ) ಬಸವನ ಲಿಂಗಧಾರಣ ಸಮಯದಲ್ಲಿ ಶ್ರೀಮತ್ಪಂಚಾಚಾರ್ಯರ ಆಹ್ವಾನ ಪೂರ್ವಕ ಪಂಚಕಲಶ ಸ್ಥಾಪನೆಯು ಆಗಿತ್ತೋ ಇಲ್ಲವೋ ? ಆಗಿದ್ದಪಕ್ಷದಲ್ಲಿ ಪ್ರಮಾಣಗಳನ್ನು ಕೊಟ್ಟು ಸಿದ್ಧಪಡಿಸೆಂದು ಪ್ರಶ್ನೆಮಾಡಿದ್ದಕ್ಕೆ-ಶ್ರೀಪಂಚಾಚಾರ್ಯರಆಹ್ವಾನ ಪೂರ್ವಕ ಪಂಚಕಲಶ ಸ್ಥಾಪನೆಯು ಆಗಿತ್ತೆಂದು

ಬರೆದು ಈ ವಿಷಯದಲ್ಲಿ “ ಷಡಧ್ವ ಶೋಧಿತಂ ಲಿಂಗಂ ಚಂದ್ರಕಾಂತ ಶಿಲಾಮಯಂ | ನೀತ್ವಾ ತತ್ರಕಲಾಂ ಸೂಕ್ಷ್ಮಾಂ ಸಂನಿವೇಶ್ಯಕೃಪಾನಿಧಿಃ || ಶೈವೀಂ ಪಂಚಾಕ್ಷರೀಂ ಪುಣ್ಯಾಂ ಪ್ರಣವೇನ ಸಮನ್ವಿತಾಂ | ನಿಗೂಢಂ ದಕ್ಷಿಣೇಕರ್ಣೇಜಜಾಪಪರಮೇಶ್ವರಃ || ತತಸ್ತತ್ಕಂ ಠದೇಶೇತು ಚಕ್ರೇಲಿಂಗಸ್ಯ ಧಾರಣಂ || ಎಂಬೀ ಬಸವ ಪುರಾಣದ ಶ್ಲೋಕಗಳನ್ನು ಪ್ರಮಾಣಗಳನ್ನಾಗಿ ಉದಾಹರಿಸಿರುವಿ. ಈ ಶ್ಲೋಕಗಳಲ್ಲಿ ಪಂಚಾಚಾರ್ಯರ ಆಹ್ವಾನಪೂರ್ವಕ ಪಂಚಕಲಶಸ್ಥಾಪನೆಯ ವಿಷಯವು ಬಂದಿರುವದೋ ? ದಡ್ಡಾ—ಪ್ರಥಮ ಪುಸ್ತಕವನ್ನೋದುವ ಹುಡುಗನೂಕೂಡ ಹೀಗೆ ಉತ್ತರವನ್ನು ಹೇಳ ಲಾರನು ! ಪ್ರಮಾಣಗಳನ್ನು ತೋರಿಸದೆ ಸುಮ್ಮನೆ ಅನುಮಾನ ಮಾಡಿದರೆ ಯಾರೂ ಒಪ್ಪಲಾರರು !

( ೨೭—೨೮—ಉ—ವಿ. ) ಬಸವನ ಲಿಂಗಧಾರಣ ಸಮಯದಲ್ಲಿ ಪಂಚಕಲಶ ಸ್ಥಾಪನೆಯ ವಿಷಯದಲ್ಲಿಯೂ, ಶ್ರೀಮತ್ಪಂಚಾಚಾರ್ಯರಲ್ಲಿ ಇಂಥೊಬ್ಬ ಆಚಾ ರ್ಯನು ಗುರುವಾಗಿದ್ದನೆಂಬ ವಿಷಯದಲ್ಲಿಯೂ, ಉಳಿದ ನಾಲ್ವರು ಆಚಾರ್ಯರು ಋತ್ವಿಜರಾಗಿದ್ದರೆಂಬ ವಿಷಯದಲ್ಲಿಯೂ ಪ್ರಮಾಣಗಳನ್ನು ತೋರಿಸದೆ ವಾಚ್ಯಾತ್ರ ದಿಂದ ಉತ್ತರವನ್ನು ಹೇಳಿರುವ ಕಾರಣ ಬಸವನ ಲಿಂಗಧಾರಣವು ಶಾಸ್ತ್ರಸಿದ್ಧವಾದುದೆಂದೂ ಬಸವನಲ್ಲಿ ನಿಜವಾದ ವೀರಶೈವತ್ವವಿರುವದೆಂದೂ ಹೇಳುವ ಬಗೆ ಹ್ಯಾಗೆ ! ಬಸವನಿಗೆ ನಿರಧಿಕರಣ ದೀಕ್ಷೆಯಾಗಿತ್ತೆಂದು ಮೊದಲು ಬಡಬಡಿಸಿರುವಿಮಷ್ಟೆ ! ಪುನಃ ಈಗ ಪಂಚ ಕಲಶ ಸ್ಥಾಪನ ಪಂಚಾಚಾರ್ಯರ ಆಹ್ವಾನ ವಿಷಯವನ್ನು ಒಪ್ಪುವಿ; ಅಂದಮೇಲೆ ನಿನ್ನ ಉತ್ತರಗಳು ಒಂದಕ್ಕೊಂದು ಸಂಬಂಧಗಳಾಗುವವೋ ಇಲ್ಲವೋ ಎನ್ನುವದನ್ನು ನೀನೇ ವಿಚಾರಿಸು :

( ೨೯—೩೦—ಉ—ವಿ ) ಬಾಗೇವಾಡಿಗೆ ‘ ಇಂಗಳೇಶ್ವರ ” ಎಂಬ ಎರಡನೆಯ ಹೆಸರುಂಟೆಂದು ಬರೆದಿರುವಿ. ಈ ವಿಷಯವನ್ನು ಯಾರಾದರೂ ಗ್ರಂಥಕಾರರು ತಮ್ಮ ಗ್ರಂಥಗಳಲ್ಲಿ ಬರದಿರುವರೋ ಅಥವಾ ನಿನ್ನ ಬಾಯಿ ಗ್ರಂಥದಲ್ಲಿ ಬರದಿರುವದೋ ? ಹೇಳು ! ಬಾಗೇವಾಡಿಗೂ ಇಂಗಳೇಶ್ವರಕ್ಕೂ ೧೨ ಮೈಲು ಅಂತರವದೆ. ನಿನ್ನ ಅಭಿಪ್ರಾ ಯದಂತೆಯೇ ಹೋದರೆ ಪೂರ್ವದಲ್ಲಿ ಬಾಗೇವಾಡಿಯು ೧೨ ಮೈಲುಗಳಿಗಿಂತಲೂ ವಿಸ್ತಾ ರವುಳ್ಳದ್ದಾಗಿರಬೇಕಾದೀತು ! ಅಷ್ಟು ದೊಡ್ಡ ಪಟ್ಟಣವೆಂದು ಇತ್ತೆಂದು ನಿನ್ನ ಅಭಿಪ್ರಾಯವಿ ದ್ದಲ್ಲಿ ಇಂಥಮಹಾಪಟ್ಟಣವನ್ನು ಪ್ರಸಿದ್ಧ ಇತಿಹಾಸಕಾರರು ವರ್ಣಿಸಿರಬೇಕಲ್ಲವೇ ? ವರ್ಣಿಸಿದ್ದರೆ ತೋರಿಸು ! ಹಂಪೆಮೊದಲಾದ ಪಟ್ಟಣಗಳು ಹಾಳಾಗಿಹೋಗಿದ್ದರೂ ಇತಿ ಹಾಸಕಾರರು ಅವುಗಳ ವರ್ಣನವನ್ನು ಹ್ಯಾಗೆ ಮಾಡಿದ್ದಾರೆನ್ನುವದನ್ನು ನೋಡು. ಇರಲಿ ಈ ವಿಷಯಲ್ಲಿ ಕಾಶೀ ದೃಷ್ಟಾಂತವನ್ನುಕೊಟ್ಟಿರುವಿ ; ಕಾಶೀಕ್ಷೇತ್ರವು ವರುಣಾ,

ಹಾಗೂ " ಅಸೀ " ನದಿಗಳ ಮಧ್ಯದಲ್ಲಿರುವದರಿಂದ ಇದಕ್ಕೆ " ವಾರಾಣಸೀ ,, ಎಂಬ ಪರ್ಯಾಯನಾಮವು ಬಂದಿದೆ. ಇದರಂತೆ ಬಾಗೇವಾಡಿಗೆ ಇಂಗಳೇಶ್ವರವೆಂಬ ನಾಮವು ಬರಲಿಕ್ಕೆ ಯೋಗ್ಯಕಾರಣವೇನಾದರೂ ಇದ್ದರೆ ಪ್ರಮಾಣ ಪೂರ್ವಕವಾಗಿ ತೋರಿಸು. ಬಸವಪುರಾಣ ಹಾಗೂ ಪ್ರಭುಲಿಂಗಲೀಲೆಗಳನ್ನು ರಚಿಸಿದ ಗ್ರಂಥಕಾರರು ಭಿನ್ನ ಭಿನ್ನರಾಗಿದ್ದಾರೆಂದು ಚಿಕ್ಕ ಬಾಲಕರಿಗೂ ಕೂಡ ತಿಳಿಯುತ್ತಿದ್ದರೂ ಒಬ್ಬನೇಗ್ರಂಥ ಕಾರನೆಂಬ ನಿನ್ನ ದುರುದ್ದೇಶವನ್ನು ಸಾಧಿಸುವದಕ್ಕೋಸ್ಕರ ಎಷ್ಟು ಕಷ್ಟಪಡುವಿಯಲ್ಲ.

( ೩೧-೩೨-ಉ-ವಿ. ) ಬಸವ ಪುರಾಣಕಾರನು ಹಾಗೂ ಪ್ರಭುಲಿಂಗಲೀಲಾ ಕಾರನು ಈ ಉಭಯಕವಿಗಳು ಬೇರೆಬೇರೆಯಾಗಿದ್ದು ಬಸವನ ಹೆಸರಿಡುವ ಬಗ್ಗೆ ತಮ್ಮ ತಮ್ಮ ಭಿನ್ನಾಭಿಪ್ರಾಯಗಳನ್ನು ಸ್ಪಷ್ಟವಾಗಿ ತೋರಿಸಿದ್ದಾರೆ. ಹಿಗಿದ್ದರೂ ಮೊದಲು ಸಂ ಗಮೇಶ್ವರನು ಹೆಸರನ್ನಿಟ್ಟನೆಂದೂ ಆಮೇಲೆ ಊರವರೆಲ್ಲರು ಕೂಡಿ ಹೆಸರನ್ನಿಟ್ಟರೆಂದೂ ಬಹುಬುದ್ಧಿಯನ್ನು ಖರ್ಚು ಮಾಡಿ ಬರೆದಿರುವಿ. ನಿನ್ನೀ ಅಭಿಪ್ರಾಯವೇ ನಿಜವಾಗಿದ್ದರೆ ಆ ಪ್ರಕಾರವಾಗಿಯೇ ಆ ಗ್ರಂಥಕಾರರು ತಮ್ಮ ತಮ್ಮ ಗ್ರಂಥಗಳಲ್ಲಿ ಸ್ಪಷ್ಟವಾಗಿ ಬರೆಯು ತ್ತಿದ್ದರಷ್ಟೆ! ಹೀಗೆ ಹೇಳುವದು ನಿನ್ನ ಕುಕಲ್ಪನವೇ ಸರಿ!

( ೩೩-ಉ-ವಿ. ) ಅಲ್ಲಮ ಹಾಗೂ ಬಸವ ಇವರಿಬ್ಬರ ಉತ್ಕೃಷ್ಟತ್ವವನ್ನು ಸಾಧಿಸುವದಕ್ಕೋಸ್ಕರ ಈಗ ಕೆಲವು ವರ್ಷಗಳ ಪೂರ್ವದಲ್ಲಿದ್ದ ಹಂಪಿವಿರೂಪಾಕ್ಷ ಪಂಡಿತನು ಪ್ರಭುಲಿಂಗಲೀಲೆಯನ್ನೂ ಹಾಗೂ ಹೇಲಾಪುರದ ಬಸವ ಕವಿಯಂ ಬವನು ಬಸವ ಪುರಾಣವನ್ನೂ ಸಂಸ್ಕೃತದಲ್ಲಿ ಬರೆದು ತಮ್ಮ ಹೆಸರನ್ನಿಟ್ಟುಕೊಳ್ಳದೆ ವ್ಯಾಸನ ಹೆಸರನ್ನಿಟ್ಟದ್ದಾದರೆ ಇವು ಲೋಕಮಾನ್ಯಗಳಾಗುವವೆಂಬ ದುರ್ಬುದ್ಧಿ ಯಿಂದ ಪ್ರಸಿದ್ಧ ಮಾಡಿರುತ್ತಾರೆ. ಈ ಹುಳುಕು ಅವರವರ ಗ್ರಂಥದಿಂದಲೇ ತಿಳಿದು ಬರು ತ್ತದೆ. ಈ ನಿಜತತ್ವವನ್ನು ತಿಳಿಯದೆ ಈ ಎರಡೂ ಗ್ರಂಥಗಳನ್ನು ವ್ಯಾಸನೇ ಬರೆದಿರುವನೆಂ ದೂ, ಈಗ್ರಂಥಗಳಲ್ಲಿ ಪರಸ್ಪರ ವಿರುದ್ಧವೇನೂ ಇಲ್ಲವೆಂದೂ ಬರೆದಿರುವಿ. ಇದರ ಮೇಲಿಂದ ನೀನು ಈ ಗ್ರಂಥಗಳನ್ನು ಆ ಮೂಲಾಗ್ರವಾಗಿ ನೋಡದೆ ಸುಮ್ಮನೆ ವ್ಯಾಸನ ಹೆಸರಿನಿಂದ ಬಡಬಡಿಸುವಿ ಎಂದು ಸ್ಪಷ್ಟವಾಗಿ ತೋರುತ್ತದೆ. ಈ ಗ್ರಂಥಗಳಲ್ಲಿರತಕ್ಕ ಪರಸ್ಪರ ವಿರೋ ಧವನ್ನು ತೋರಿಸುತ್ತೇವೆ. ನೋಡು! ಬಸವ ಪುರಾಣದಲ್ಲಿ ಸರ್ವತ್ರ " ಬಿಜ್ಜಲ " ಎಂದು ಪ್ರಯೋಗಗಳಿದ್ದರೆ ಪ್ರಭುಲಿಂಗಲೀಲೆಯಲ್ಲಿ " ಬೀಜಲ " ಎಂದು ಪ್ರಯೋಗಗಳಿರು ತ್ತವೆ. ಬಸವ ಪುರಾಣದಲ್ಲಿ " ಚನ್ನಬಸವ " ಎಂದು ಪ್ರಯೋಗಗಳಿದ್ದರೆ ಪ್ರಭುಲಿಂ ಗಲೀಲೆಯಲ್ಲಿ " ಛನ್ನಬಸವ " ಎಂದು ಪ್ರಯೋಗಗಳಿರುತ್ತವೆ. ಬಸವ ಪುರಾಣ ದಲ್ಲಿ " ಮಾದಿರಾಜ " ಎಂದು ಉಲ್ಲೇಖವಿದ್ದರೆ ಪ್ರಭುಲಿಂಗ ಲೀಲೆಯಲ್ಲಿ " ಮಾದ ನಮಂತ್ರಿ " ಎಂದು ಉಲ್ಲೇಖ ವಿರುತ್ತದೆ. ಬಸವ ಪುರಾಣದಲ್ಲಿ " ಹಿಂಗುಲೀಪುರ "

ಎಂದು ಉಲ್ಲೇಖವಿದ್ದರೆ ಪ್ರಭುಲಿಂಗಲೀಲೆಯಲ್ಲಿ " ಭಾಗವಾಟೀ " ಎಂದು ಉಲ್ಲೇಖ ವಿರುತ್ತದೆ. ಬಸವ ಪುರಾಣದಲ್ಲಿ ಕೂಡಲಿ ಸಂಗವು " ಎಂದು ಉಲ್ಲೇಖವಿದ್ದರೆ ಪ್ರಭುಲಿಂಗ ಲೀಲೆಯಲ್ಲಿ " ಕರ್ಪಟಿ ಸಂಗವು " ಎಂಬು ಉಲ್ಲೇಖ ವಿರುತ್ತದೆ. ಬಸ ವಪುರಾಣದಲ್ಲಿ "ಬಸವ" ಎಂದು ಶಬ್ದಸಿದ್ಧಿಯಿದ್ದರೆ ಪ್ರಭುಲಿಂಗಲೀಲೆಯಲ್ಲಿ "ಬಸುವ" ಎಂದು ಶಬ್ದ ಸಿದ್ಧಿಯಿರುತ್ತದೆ. ಬಸವನು ಬಲದೇವನ ಮಗಳನ್ನು ಮೊದಲು ಲಗ್ನ ಮಾಡಿ ಕೊಂಡು ಆಮೇಲೆ ತಾನು ಮಂತ್ರಿಯ ಪದವಿಯನ್ನು ವಹಿಸಿದನೆಂದು ಬಸವ ಪುರಾಣದಲ್ಲಿ ಬರೆದಿರುತ್ತದೆ. ಆದರೆ ಪ್ರಭುಲಿಂಗ ಲೀಲೆಯಲ್ಲಿ ಬಸವನು ತಾನು ಮಂತ್ರಿಯಾದ ನಂ ತರ ಲಗ್ನವಾದನೆಂದು ಬರೆದಿರುತ್ತದೆ. ಈ ಪ್ರಕಾರವಾಗಿ ಈ ಎರಡೂ ಗ್ರಂಥಗಳಲ್ಲಿ ಪರ ಪರಸ್ಪರವಾಗಿ ಸಾವಿರಾರು ದೋಷಗಳಿರುತ್ತವೆ ವಿಸ್ತಾರ ಭಯದಿಂದ ಬರೆದಿರುವ ದಿಲ್ಲ. ಇರಲಿ; ಈ ಗ್ರಂಥಗಳು ವ್ಯಾಸನಿರ್ಮಿತಗಳಲ್ಲವೆಂದು ಆ ಗ್ರಂಥಗಳಿಲ್ಲಿರತಕ್ಕ ಶ್ಲೋ ಕಗಳಿಂದಲೇ ಸಿದ್ಧವಾಗುತ್ತದೆ ನೋಡು! ಪ್ರಭುಲಿಂಗಲೀಲೆಯ ೧ನೆಯ ಅಧ್ಯಾಯ ದಲ್ಲಿರತಕ್ಕ " ವೀರೇಶ್ವರಾಂಘ್ರಿ ಭಜನಾಭಿಗತಾಮುನೀಂದ್ರಾಃ ಸಾರಂಕಥಾಸಮುದಯೇ ಪ್ರಮಥಾವತಾರಂ। ವ್ಯಾಸೋಪದಿಷ್ಟಮಧಿಕೃತ್ಯವದಾಮಿ ಯೂಯಂಶೃಣ್ವಂತು ಭಕ್ತರ ಸಿಕಾಃ ಪ್ರಭುಲಿಂಗಲೀಲಾಂ ॥ ಎಂಬೀಪದ್ಯದಲ್ಲಿ " ವ್ಯಾಸೋಪದಿಷ್ಟಮಧಿಕೃತ್ಯವ ದಾಮಿ " ಎಂಬ ವಾಕ್ಯವಿರೋಧದರಿಂದಲೂ, ಹಾಗೂ ೨೫ ನೆಯ ಅಧ್ಯಾಯದಲ್ಲಿರತಕ್ಕ " ಇಯಮಖಿಲಮುನೀಂದ್ರಾಃ ಶ್ರೀಗುರೋರ್ದಿವ್ಯಲೀಲಾ ಗಣಚರಿತವಿಶಾಲಾ ವ್ಯಾಸಮೌನಿ ಪ್ರಸಾದಾತ್ | ಹೃದಯಕಮಲವಾಸಿ ಶ್ರೀಮಹೇಶಾಜ್ಞಯೋಕ್ತಾ ಪ್ರಭವತುಪರಿತೃಣಾಂ ಭೋಗಮೋಕ್ಷಾನುಕೂಲಾ ॥ ಎಂಬೀ ಪದ್ಯದಲ್ಲಿ " ವ್ಯಾಸಮೌನಿ ಪ್ರಸಾದಾತ್ " ಎಂಬ ವಾಕ್ಯವಿರೋಧದರಿಂದಲೂ ಈ ಪ್ರಭುಲಿಂಗಲೀಲೆಯನ್ನು ವ್ಯಾಸನು ರಚಿಸಿಲ್ಲವೆಂದು ಸ್ಪಷ್ಟವಾಗಿ ಕಂಡುಬರುತ್ತದೆ. ಹಾಗೂ ಸಂಸ್ಕೃತ ಬಸವ ಪುರಾಣದ ೪೩ನೆಯ ಅಧ್ಯಾ ಯದಲ್ಲಿರತಕ್ಕ " ವೈಯ್ಯಾಸಿಕೀನಾಂ ಸರ್ವಾಸಾಂಕೃತೀನಾಮುಜ್ಜ್ವಲಾತ್ಮನಾಂ। ಪುರಾಣ ಮೇತತ್ಸಾರೇಣ ಸರ್ವೋತ್ತಮ ಮಭೂನ್ಮಹತ್ ॥ ದೃಷ್ಟ್ವಾವಿಸ್ಮಯಮಾಪನ್ನೋವ್ಯಾಸಃ ಶಂಭೋಶ್ಚ ಸನ್ನಿಧೌ | ಸರ್ವೇಷ್ವಪಿಪುರಾಣೇಷು ಶ್ರೇಷ್ಠೋಯಮಿತಿಚಾಬ್ರವೀತ್ ॥ ವ್ಯಾಸ ಸ್ತತಃಶಿವಸಭಾಂತರಮಧ್ಯದೇಶಾನ್ನಾನಾ ಮುನಿಪ್ರಮಥದೈವತಸಂಘಜುಷ್ಟಾತ್ | ವ್ರೀಡಾವ ನಮ್ರವದನಃ ಪರಮೇಶ್ವರೇಣಾಜ್ಞಪ್ತೋಯಯೌ ಸಕಲ ಶಿಷ್ಯಗಣೈಃಸಮೇತಃ ॥ ಎಂಬೀ ಪದ್ಯಗಳಿಂದ ಈ ಬಸವ ಪುರಾಣವನ್ನು ವ್ಯಾಸನು ರಚಿಸಿಲ್ಲವೆಂದು ಚಿಕ್ಕ ಬಾಲಕರಿಗೂ ಕೂಡ ತಿಳಿದು ಬರುತ್ತದೆ. ಕೈಲಾಸದಲ್ಲಿ ಶಿವನ ಸಭೆಯಲ್ಲಿ ವ್ಯಾಸಮಹರ್ಷಿಯು ಕುಳಿತಿ ದ್ದನಂತೆ! ಅಗ್ಯೆ ವ್ಯಾಸನ ಯಾವತ್ತು ಪುರಾಣಗಳನ್ನೂ ಹಾಗೂ ಬಸವಪುರಾ ವನ್ನೂ ತುಲನೆಮಾಡಲಾಗಿ ಬಸವಪುರಾಣವು ಶ್ರೇಷ್ಠವಾಯಿತೆಂದೂ, ಇದನ್ನು ವ್ಯಾಸ ನು ಒಪ್ಪಿಕೊಂಡನೆಂದೂ, ಆ ಮೇಲೆ ನಾಚಿಕೆಯುಳ್ಳವನಾಗಿ ಸಭೆಯನ್ನು ಬಿಟ್ಟು ಹೋದ

ನೆಂದೂ ಈ ಶ್ಲೋಕಗಳ ಅಭಿಪ್ರಾಯವಿರುತ್ತದೆ. ಆದರೆ ಬಸವ ಪುರಾಣವನ್ನು ವ್ಯಾಸನು ತಾನೇ ರಚಿಸಿದ್ದರೆ ನಾಚಿದನೇಕೆ? ಮತ್ತಿಷ್ಟು ಆನಂದ ಪಡುಬಹುದಾಗಿತ್ತಲ್ಲವೇ! ಆದಕಾರಣ ಈ ಪುರಾಣವನ್ನು ಬೇರೊಬ್ಬ ಕವಿಯು ಬರೆದಿರುವದರಿಂದ ವ್ಯಾಸನ ಕವಿತಾ ರೀತಿಗಿಂತಲೂ ತಾನು ಬರೆದ ಬಸವ ಪುರಾಣದ ಕವಿತಾ ರೀತಿಯು ಉತ್ತಮವಾಗಿರುವ್ದೆಂಬ ಹೆಮ್ಮೆಯನ್ನು ತೋರಿಸಿದ್ದಾನೆಂದು ಪ್ರತಿಯೊಬ್ಬರಿಗೂ ಗೊತಾಗುತ್ತದೆ. ಹಾಗೂ ಈ ಶ್ಲೋಕಗಳಲ್ಲಿ "ವ್ಯಾಸ" ಎಂದು ಸ್ಪಷ್ಟವಾಗಿ ಹೆಸರು ಉಲ್ಲೇಖಿಸಿರುವ ಕಾರಣ ಈ ಗ್ರಂಥವನ್ನು ವ್ಯಾಸನು ರಚಿಸಿಲ್ಲವೆಂದು ಸ್ಪಷ್ಟವಾಗುತ್ತದೆ. ವ್ಯಾಸನು ತಾನೇ ನಿಜವಾಗಿ ರಚಿಸಿದ್ದ ಪಕ್ಷದಲ್ಲಿ ತನ್ನ ಹೆಸರನ್ನು ಆ ಪ್ರಕಾರವಾಗಿ ಎಂದೂ ತರುತ್ತಿದ್ದಿಲ್ಲ! ಹಾಗೆ ತರಲಿಕ್ಕಾದರೂ ಬರುವದಿಲ್ಲವೆಂದು ತಿಳಿ! ಆದರೆ ಈ ಗ್ರಂಥವನ್ನು ಮಲ್ಲಿಕಾರ್ಜುನನೆಂಬ ತಂದೆ ಯಿಂದಲೂ, ಗುರವ್ವನೆಂಬ ತಾಯಿಯಿಂದಲೂ, ವೀರವ್ವನೆಂಬ ಹೆಂಡತಿಯಿಂದಲೂ, ನೀರಲಿಂಗ– ಅಮೃತಲಿಂಗ– ವೀರೇಶ್ವರ– ಸಾಲ್ವೇಶ– ಮೂರ್ತಿರಾಜ– ಕೂಡಲಿಸಂಗ– ಎಂಬ ಆರುಜನ ಅಣ್ಣಂದಿರಿಂದಲೂ ಕೂಡಿದ ಹೇಲಾಪುರದ "ಬಸವಕವಿ" ಯೆಂಬವನು ಬರೆದಿದ್ದಾನೆ; ಈ ವಿಷಯವು ಅದೇಗ್ರಂಥದಿಂದಲೇ ತಿಳಿದು ಬರುತ್ತದೆ. ಇನ್ನು ಪ್ರಭುಲಿಂಗಲೀಲೆಯ ವಿಷಯವನ್ನು ವಿಚಾರ ಮಾಡೋಣ! ಪ್ರಭುಲಿಂಗಲೀಲೆಯ ಪ್ರತಿಯೊಂದು ಅಧ್ಯಾಯದ ಆದಿಯಲ್ಲಿ "ಸಿದ್ಧವೀರ" ನೆಂಬ ಗುರುವಿನ ಸ್ತುತಿಗಳಿರುತ್ತವೆ. ವ್ಯಾಸಮಹರ್ಷಿಗೆ ಈ ಹೆಸರಿನ ಗುರುವಿದ್ದನೆಂದು ಅವನಿಂದ ಬರೆಯಲ್ಪಟ್ಟ ಅಷ್ಟಾದಶ ಪುರಾಣಗಳಲ್ಲಿಯಾಗಲಿ ಮಹಾಭಾರತದಲ್ಲಿಯಾಗಲಿ ಉಲ್ಲೇಖಿರುವದೇನು? ಇದ್ದರೆ ತೋರಿಸು! ಆದರೆ ಈ ಸಿದ್ಧವೀರ" ನೆಂಬವನು ಚನ್ನಬಸವ ಪುರಾಣವನ್ನು ರಚಿಸಿದ ಹಂಪೆಯ ವಿರೂಪಾಕ್ಷ ಪಂಡಿತನ ಗುರುವಾಗಿದ್ದನು. ಇವನು ಚನ್ನಬಸವ ಪುರಾಣದ ೧ನೆಯ ಸಂಧಿಯಲ್ಲಿ "ಸಿದ್ಧವೀರ" ನೆಂಬ ತನ್ನ ಗುರುವಿನ ವರ್ಣನವನ್ನು ಎಷ್ಟು ಭಕ್ತಿಯಿಂದ ಮಾಡಿರುವನೆನ್ನುವದನ್ನು ನೋಡು.

ಪರಮ ಶಾಂತಿಯೆ ಮನೆ ಸದಯವೆ ಪರಿಕರವಾಗ | ಲಿರದೆ ಶಿವಲಿಂಗಚಿಂತನೆಯೆ ಮನವಾರ್ತೆಮ | ತ್ತಿರದೆ ಸತಿಯೇ ಮೋಕ್ಷಲಕ್ಷ್ಮಿ ಮಕ್ಕಳೇ ಶಿಷ್ಯರಾಗೆ ಸಂಸಾರಿಯಂತೆ || ಧರಣಿಯೊಳಗೆಸೆವ ವಿದ್ಯಾನಗರಿಯೋಳ್ಮೆರೆವ | ಹಿರಿಯಮಠದೋಳ್ಮಹಾಚರಲಿಂಗಸಹಿತೆಸ | ದ್ಗುರುವರಂ ಸಿದ್ಧವೀರೇಶನೊಪ್ಪಿರ್ದನಾ ಯತಿಯದೇಂ ಸಾಮಾನ್ಯನೇ || ೨೧ || ಅಂದ ಮೇಲೆ ಚನ್ನಬಸವ ಪುರಾಣ ಕರ್ತನಾದ ವಿರೂಪಾಕ್ಷಪಂಡಿತನು ಸಂಸ್ಕೃತದಲ್ಲಿ ಪ್ರಭುಲಿಂಗ ಲೀಲೆ ಯನ್ನು ಬರೆದು ಅದಕ್ಕೆ ತನ್ನ ಹೆಸರನ್ನಿಟ್ಟು ಕೊಳ್ಳದೆ ವ್ಯಾಸನ ಹೆಸರನ್ನಿಟ್ಟಿರುವನೆಂದೂ ಆದಾಗ್ಯೂ ಗುರುಭಕ್ತಿ ಧುರಂಧರನಾದ ಇವನು ತನ್ನ ಗುರುವಿನ ಸ್ತುತಿಯನ್ನು ಬಿಟ್ಟಿರುವದಿಲ್ಲವೆಂದೂ ಸರ್ವರಿಗೂ ಕನ್ನಡಿಯಂತೆ ತೋರುತ್ತದೆ. ಇದಲ್ಲದೆ ಬಸವ ಪುರಾ

ಣದ ಕವಿತಾ ಶೈಲಿಗೂ ಪ್ರಭುಲಿಂಗ ಲೀಲೆಯ ಕವಿತಾ ಶೈಲಿಗೂ ಭೂಮ್ಯಾಕಾಶದಷ್ಟು ಅಂತರ ವಿರುತ್ತದೆ. ಹೀಗಿದ್ದಾಗ್ಯೂ ನೀನು ಈ ಗ್ರಂಥಗಳ ನಿಜಸ್ವರೂಪವನ್ನು ತಿಳಿಯದೆ ಇವು ಗಳನ್ನು ವ್ಯಾಸನೇ ರಚಿಸಿದ್ದಾನೆ-ವ್ಯಾಸನೇ ರಚಿಸಿದ್ದಾನೆಂದು ನಾಚಿಕೆಯಿಲ್ಲದೆ ಬರೆಯುವದನ್ನು ನೋಡಿದರೆ ನಗೆ ಬರುತ್ತದೆ. ಇದ್ದರೆ ನಿನ್ನಂಥ ಸುಧಾರಿಸಿದ ತಲೆಯವರೇ ಇರಬೇಕು. ನಿನ್ನಂಥವರಿಂದಲೇ ಸಮಾಜೋದ್ಧಾರವು ! ವಿರೂಪಾಕ್ಷಪಂಡಿತನು ಉಭಯ ಕವಿತಾ ವಿಶಾರದನಾದ್ದರಿಂದ ಕನ್ನಡದಲ್ಲಿ ಚನ್ನಬಸವನ ಚರಿತ್ರವನ್ನು ಬರೆದು ಸಂಸ್ಕೃತದಲ್ಲಿ ಅವನ ಗುರುವಾದ ಅಲ್ಲಮನ ಚರಿತ್ರವನ್ನು ಬರೆದಿರುತ್ತಾನೆಂದು ತಿಳಿ !

( ೩೪-ಉ-ವಿ. ) ಬಸವನು ನಿಜವಾಗಿ ನಂದೀಶ್ವರನೇ ಆಗಿದ್ದ ಪಕ್ಷದಲ್ಲಿ ಅವನಿಗೆ ಇಡೀ ಭರತಖಂಡದಲ್ಲಿ ಪ್ರಸಿದ್ಧವಾದ ನಂದೀಶ್ವರನೆಂಬ ಹೆಸರನ್ನಿಡದೆ ಅಪ್ರಸಿದ್ಧವಾದ ಬಸವನೆಂಬ ಹೆಸರನ್ನಿಡಲು ಕಾರಣವೇನೆಂದು ಕೇಳಿದ್ದಕ್ಕೆ ಬಸವ ಶಬ್ದದ ಪ್ರಸಿದ್ಧತೆ ಯನ್ನು ತೋರಿಸದೆ ನಿಷ್ಪ್ರಯೋಜನವಾಗಿ ಶ್ರೀರೇಣುಕಾದ್ಯಾಚಾರ್ಯರ ಯುಗಯುಗಾಂತ ರಗಳ ನಾಮಗಳ ಹಾಗೂ ರಾಮಾದಿಗಳ ನಾಮಗಳ ದೃಷ್ಟಾಂತವನ್ನು ತೆಗೆದುಕೊಂಡು ಬರೆದಿರುವಿ. ಶ್ರೀರೇಣುಕಾದ್ಯಾಚಾರ್ಯರ ಯುಗಭೇದದ ನಾಮಗಳು ಆಗಮಾ ದಿಗಳಲ್ಲಿ ಪ್ರಸಿದ್ಧಗಳೇ ಅವೆ. ವಿಷ್ಣುವಿಗಾದರೂ ರಾಮನೆಬ ನಾಮವು ಪುರಾಣ ಪ್ರಸಿದ್ಧ ವೇ ಅದೆ. ಹೀಗಿದ್ದ ನಾಮಗಳನ್ನು ದೃಷ್ಟಾಂತಗಳನ್ನಾಗಿ ತೆಗೆದುಕೊಂಡರೆ ನಿನ್ನ ಉದ್ದೇ ಶವು ಸಾರ್ಥಕವಾಗುವದೋ? ಅಪ್ರಸಿದ್ಧವಾದ ಬಸವನಾಮವನ್ನು ಆಗಮೋಪನಿಷದಾ ದಿಗಳಿಂದ ಪ್ರಸಿದ್ಧವಾದದ್ದೆಂದು ತೋರಿಸಿದ್ದರೆ ನಿನ್ನ ಉದ್ದೇಶವು ನೆರವೇರುತ್ತಿತ್ತು. ಹೀಗೆ ಮಾಡದೆ ಸ್ವತಂತ್ರೇಚ್ಛನಾದ ಸಂಗಮೇಶ್ವರನ ಇಚ್ಛೆಯೇ ಕಾರಣವೆಂದು ಹೇಳುತ್ತೇವೆಂದು ಬರೆದಿರುವದು ಜಾಣತನದ ಲಕ್ಷಣವಲ್ಲ !

( ೩೫-ಉ-ವಿ. ) ಬಸವ ಶಬ್ದದ ನಿಜಾರ್ಥವೇನೆಂದು ಪ್ರಶ್ನೆ ಮಾಡಿದ್ದಕ್ಕೆ "ಬಸವ ಅಂದರೆ ಎತ್ತು" ಎಂದು ಅರ್ಥವನ್ನು ಹೇಳದೆ "ವಸಂತೀತಿವಸಾಃ- ತಾನ್ವಾತಿ- ಗಂಧಯತೀತಿ ವಸವಃ" ಎಂದು ಮನಸಿಗೆ ಬಂದಂತೆ ವ್ಯುತ್ಪತ್ತಿಯನ್ನು ಮಾಡಿ ಕೊಂಡು ಮನಸ್ಸಿಗೆ ಬಂದಂತೆ ಅರ್ಥವನ್ನು ಬರೆದಿರುವದನ್ನು ನೋಡಿದರೆ ಸಂಸ್ಕೃತಜ್ಞರು ಬಿದ್ದು ಬಿದ್ದು ನಗದೆ ಇರಲಾರರು. ಹಾಗಾದರೆ "ಮಾದಿಗ" ಎಂಬ ಶಬ್ದದ ನಿಜಾರ್ಥ ವೇನೆಂದು ಯಾರಾದರೂ ಕೇಳಿದರೆ ಅಂತ್ಯಜನೆಂದು ಅರ್ಥವನ್ನು ಹೇಳದೆ "ಆದೌಗ ಚ್ಛತೀತ್ಯಾದಿಗಃ- ಮಾಯಾಃ ಆದಿಗಃ= ಮಾದಿಗಃ" ಎಂದು ವ್ಯುತ್ಪತ್ತಿಯನ್ನು ಮಾಡಿ ಕೊಂಡು ಮಾದಿಗನೆಂದರೆ ಲಕ್ಷ್ಮೀರಮಣನೆಂದು ಅರ್ಥವನ್ನು ಹೇಳಿದರೆ ಅತ್ಯಂತ ಮೂರ್ಖ ತನವಾಗಲಿಕ್ಕಿಲ್ಲವೇ !

( ೩೬-ಉ-ವಿ. ) ಬಸವ ಶಬ್ದವು ಸಂಸ್ಕೃತವೋ ಅಥವಾ ಕನ್ನಡವೋ ಎಂದು

ಪ್ರಶ್ನೆ ಮಾಡಿದ್ದಕ್ಕೆ ಬಸವ ಶಬ್ದವು ಸಂಸ್ಕೃತವೆಂದು ಬರೆದಿರುವಿ. ಇದರಿಂದ ನಿನ್ನ ಅವಿವೇಕತನಕ್ಕೆ ಬೆಲೆಯಿಲ್ಲದಾಗಿದೆ. ಯಾಕಂದರೆ ಬಸವ ಶಬ್ದವು ಕನ್ನಡವಾಗಿರುವದೆಂದು ಕನ್ನಡ ನಿಘಂಟುಗಳು ಘಂಟಾಘೋಷವಾಗಿ ಸಾರುತ್ತಿರುವದನ್ನು ಕೇಳಿಲ್ಲವೋ? ಕರ್ನಾಟಕ ಕಲ್ಪದ್ರುಮ ವೆಂಬ ಕನ್ನಡ ನಿಘಂಟಿನ ೫೭೮ ನೆಯ ಪುಟವನ್ನು ನೋಡು. ಬಸವ= ಎತ್ತು. ಎಂದು ಸ್ಪಷ್ಟವಾಗಿ ಅರ್ಥವು ಬರಿಯಲ್ಪಟ್ಟಿದೆ. ಹಾಗೂ ಮರಿತೋಂಟದಾರ್ಯರಿಂದ ರಚಿಸಲ್ಪಟ್ಟ ಕರ್ನಾಟಕ ಶಬ್ದಮಂಜರಿಯಲ್ಲಿ " ಬಸವನೆನೆ ಗೊಂದೆಯೆನೆ ಚಾರುತರ ವೃಷಭನೋಳ್ಪೆಸರಕ್ಕು " ಎಂದು ವೃಷಭನಿಗೆ ಕನ್ನಡಭಾಷೆಯಲ್ಲಿ " ಬಸವ " ನೆಂದೂ " ಗೊಂದೆ " ಯೆಂದೂ ಹೆಸರುಂಟೆಂದು ಸ್ಪಷ್ಟವಾಗಿ ಉಲ್ಲೇಖಿಸಲ್ಪಟ್ಟದೆ. ಇದನ್ನಾದರೂ ಕಣ್ದೆರೆದು ನೋಡು. ಇದಲ್ಲದೆ ಕರ್ನಾಟ ಭಾಷಾಕರ– ಕಬ್ಬಿಗರಕೈಪಿಡಿ ಟೀಕಾ ಮೊದಲಾದವುಗಳನ್ನು ನೋಡಿ ಭ್ರಾಂತಿಯಿಂದ ದೂರನಾಗು !

(೩೭–ಉ–ವಿ.) ಬಸವ ಶಬ್ದವು ಶುದ್ಧ ಕನ್ನಡ ಭಾಷೆಯದಿರುವದೆಂದು ಚಿಕ್ಕ ಬಾಲಕರಿಗೂ ಕೂಡ ತಿಳಿಯುವಂತೆ ಮೇಲಿನ ವಿಮರ್ಶದಲ್ಲಿ ಸ್ಪಷ್ಟೀಕರಿಸಿದೆ. ಆದಾಗ್ಯೂ " ವಸಂತೀತಿ ವಸಾಃ– ತಾನ್ ವಾತೀತಿ– ವಸವಃ " ಎಂದು ವ್ಯುತ್ಪತ್ತಿಯನ್ನು ಮಾಡಿಕೊಂಡು ಬಸವ ಶಬ್ದವು ಸಂಸ್ಕೃತವೆಂದೇದುರಭಿಮಾನದಿಂದ ಸಾಧಿಸಿರುವಿ. ದುರಭಿಮಾನವನ್ನು ವಹಿಸಿ ಸಾಧಿಸಲಿಕ್ಕೆ ಹೋದರೆ ಕನ್ನಡ ಭಾಷೆಯ ಲಕ್ಷಾವಧಿ ಶಬ್ದಗಳನ್ನು ಸಂಸ್ಕೃತಗಳೆಂದು ಸಾಧಿಸ ಬಹುದು. " ಅಗಸ–ಕುರಬ " ಎಂಬ ಶಬ್ದಗಳು ಕನ್ನಡ ಭಾಷೆಯವಷ್ಟೆ! ಇವುಗನ್ನು ಸಂಸ್ಕೃತದಲ್ಲಿ ಸಾಧಿಸುತ್ತೇವೆ ನೋಡು. ಅಶ್ಚ– ಗಶ್ಚ– ಸಶ್ಚ– ಅಗಸಾಃ=ವಿಷ್ಣುಗಣೇಶ ಶಂಕರಾಃ-ಅಸ್ಯಸಂತೀತಿ-ಅಗಸಃ– |ಮತ್ವರ್ಥೀಯೇಽಚ್ಪ್ರತ್ಯಯಃ| ದೇವತ್ರಯಸ್ವರೂಪವಾನಿತ್ಯರ್ಥಃ ॥ ಎಂಬೀ ವ್ಯುತ್ಪತ್ತಿಯಿಂದ ಅಗಸನೆಂದರೆ ವಿಷ್ಣುಗಣೇಶ ಶಿವಸ್ವರೂಪ ವುಳ್ಳವನೆಂದು ಅರ್ಥವಾಗುತ್ತದೆ. " ಅಕಾರೋ ವಾಸುದೇವಃಸ್ಯಾತ್ " " ಗೋಗಣೇಶಃ ಸಮುದ್ದಿಷ್ಟಃ " " ಸಃಕೋಪೇವಾರಣೇಸಸ್ಯಾತ್ತ್ರಥಾಶೂಲಿನಿ ಕೀರ್ತಿತಃ " ಇತ್ಯೇಕಾಕ್ಷರಕೋಶವು ! ಇನ್ನು " ಕುರುಬ " ಶಬ್ದವನ್ನು ಸಾಧಿಸೋಣ ! ಕುಃ– ಶಬ್ದಃ– ತಸ್ಯ– ರುಃ– ಉತ್ಪತ್ತಿಃ– ಯಸ್ಮಾತ್ ಸಃ– ಕುರುಃ– ಆಕಾಶಃ| ಸಏವ– ಬೇ– ಗರ್ಭೇ– ಯಸ್ಯಸಃ– ಕುರುಬಃ= ಆಕಾಶಗರ್ಭಃ ಪರಬ್ರಹ್ಮೇತ್ಯರ್ಥಃ ॥ ಎಂಬೀ ವ್ಯುತ್ಪತ್ತಿಯಿಂದ ಕುರುಬನೆಂದರೆ ಪರಪ್ರಹ್ಮನೆಂದು ಅರ್ಥವಾಗುತ್ತದೆ. " ಪ್ರಥಿವ್ಯಾಂಕುಃ ಸಮಾಖ್ಯಾತಃ ಕುಃ ಶಬ್ದೇಽಪಿಪ್ರಕೀರ್ತಿತಃ " " ರುರ್ಥವೇಚಪ್ರಕೀರ್ತಿತಃ " ಇತ್ಯೇಕಾಕ್ಷರ ಕೋಶವು ! " ಬಃ ಕುಂಭೇವರುಣೇಬಿಂದೌಪಕ್ಷೇ ಗರ್ಭೇಚಪರ್ವಣಿ " ಇತಿನಾನಾರ್ಥ ರತ್ನಮಾಲಾ– ಈ ಪ್ರಕಾರವಾಗಿ ಅಗಸ– ಕುರುಬ– ಶಬ್ದಗಳನ್ನು ಸಾಧಿಸಿದರೆ ಎಷ್ಟು ಮಹತ್ವಾರ್ಥವನ್ನು ಕೊಟ್ಟವೆನ್ನುವದನ್ನು ನೋಡಿದಿರಾ ! ಇದಲ್ಲದೆ " ಕೋಣ– ನಾಯಿ– ಇಲಿ–

ರಾಗಿ- ಗೋದಿ- ಅಂಗಿ- ಕಾಯಿ- ತಾಲಿ- ಗಂಗಾಳ-ಮೊದಲಾದ ಅಸಂಖ್ಯ ಕನ್ನಡ ಶಬ್ದಗಳು ಸುಲಲಿತಗಳಾಗಿ ಸಂಸ್ಕೃತಗಳಾಗುತ್ತವೆ. ಆದಾಗ್ಯೂ ದುರಭಿಮಾನ ದಿಂದ ಕನ್ನಡ ಶಬ್ದಗಳನ್ನು ಸಂಸ್ಕೃತಗಳೆಂದು ಸಾಧಿಸುವದು ಕೇವಲ ಪಾಪಕಾರ್ಯವ ಲ್ಲದೆ ಬೇರೊಂದಿಲ್ಲ ; ಆದ್ದರಿಂದ ಬಸವ ಶಬ್ದವು ಸಂಸ್ಕೃತವೆಂದು ಹೇಳುವದು ಕೇವ ಲ ಪಾಪವು !

( ೩೮—ಉ—ವಿ. ) ಮೇಲಿನ ವಿಮರ್ಶಗಳಿಂದ ಬಸವ ಶಬ್ದವು ಶುದ್ಧ ಕನ್ನಡ ಭಾಷೆಯದೆಂದು ಸಿದ್ಧವಾಗಿರುವದು ಇಂಥ ಕನ್ನಡ ಶಬ್ದದ ಬಗ್ಗೆ ಸಂಸ್ಕೃತ ಬಸವ ಪುರಾಣಕಾರನು ಈ ಶಬ್ದವು ಸಂಸ್ಕೃತವೆಂದು ಸಾಧಿಸಿ " ಬಸವ " ಎಂದು ಸಿದ್ಧಮಾ ಡಿದ್ದೂ ಹಾಗೂ ಪ್ರಭುಲಿಂಗಲೀಲಾಕಾರನು " ಬಸುವ " ಎಂದು ಸಿದ್ಧಮಾಡಿದ್ದೂ ಕೇವಲ ಭ್ರಮೆಯೇ ಸರಿ ! ಆದ್ದರಿಂದ ಈ ಈರ್ವರಕವಿಗಳು ಮಾಡಿದ ವ್ಯುತ್ಪತ್ತಿಗಳು ಅಯ ತಾರ್ಥಗಳೆಂದು ಸಂಸ್ಕೃತಜ್ಞರು ಕೈಯೆತ್ತಿ ಸಾರಬಲ್ಲರು !

( ೩೯—ಉ—ವಿ. ) ಕನ್ನಡವಾದ ಬಸವ ಶಬ್ದವನ್ನು ಬಸವ ಪುರಾಣಕಾರನು " ವಸ್ " ಎಂಬ ಸಂಸ್ಕೃತಧಾತುವಿನಿಂದ ಸಿದ್ಧಮಾಡಿದ್ದೂ ಹಾಗೂ ಪ್ರಭುಲಿಂಗಲೀಲಾ ಕಾರನು " ವಸು " ಎಂಬ ಶಬ್ದದಿಂದಲೂ ಹಾಗೂ " ವಾ " ಎಂಬ ಧಾತುವಿನಿಂದಲೂ ಸಿದ್ಧಮಾಡಿದ್ದೂ ಶುದ್ಧ ಅನ್ಯಾಯುವು ! ಪ್ರಭುಲಿಂಗಲೀಲಾಕಾರನು ನಪುಂಸಕಲಿಂಗದಲ್ಲಿ ಪಠಿತವಾದ " ವಸು " ಶಬ್ದವನ್ನು ಪುಲ್ಲಿಂಗವನ್ನಾಗಿ ಮಾಡಿಕೊಂಡು ಯಾಕೆ ಪ್ರಯೋ ಗಿಸಿದನೆಂದು ಉತ್ತರವಾದಿಯ ಬುದ್ಧಿಯನ್ನು ಪರೀಕ್ಷಿಸುವದಕ್ಕೋಸ್ಕರ ಪ್ರಶ್ನಕರ್ತನು ಕೇಳಿದ್ದಕ್ಕೆ ನೀನು " ವಾರಿವಾಹಃ- ಅಹಸ್ಕರಃ ನಿಶಾಕರಃ " ಎಂಬ ಶಬ್ದಗಳ ದೃಷ್ಟಾಂತವನ್ನು ಕೊಟ್ಟಿರುವಿ. ಇದರಿಂದ ನಿನ್ನ ಬುದ್ಧಿಗೆ ಎಣೆಯೇ ಇಲ್ಲವೆಂದು ಹೇಳ ಬೇಕಾಗುತ್ತದೆ. ಯಾಕಂದರೆ- ನೀನು " ವಾರಿ- ಅಹಸ್- ನಿಶಾ " ಎಂಬ ಶಬ್ದ ಗಳನ್ನು ಪುಲ್ಲಿಂಗಗಳನ್ನಾಗಿ ಮಾಡಿಕೊಂಡು ವಿಗ್ರಹಗಳನ್ನು ಮಾಡಿದ್ದರೆ ಸರಿಯಾದ ಉತ್ತರವನ್ನು ಹೇಳಿದಂತೆ ಆಗುತ್ತಿತ್ತು. ಹಾಗೆ ಮಾಡಿಕೊಳ್ಳದೆ " ವಾರಿ " ಮೊದಲಾದ ಶಬ್ದಗಳನ್ನು ನಿಜವಾದ ಲಿಂಗಗಳನ್ನಾಗಿ ಮಾಡಿಕೊಂಡು ವಿಗ್ರಹವನ್ನು ಮಾಡಿದರೆ ವಿಗ್ರಹಾಂತದಲ್ಲಿ ಪುಲ್ಲಿಂಗಗಳು ಆಗೇ ಆಗುತ್ತವೆನ್ನುವದನ್ನು ಸಮಾಸಚಕ್ರವನ್ನು ಓದುವ ಹುಡುಗರಾದರೂ ಹೇಳುತ್ತಾರೆ. ಒಟ್ಟಿಗೆ ಪ್ರಶ್ನಕರ್ತನ ಅಭಿಪ್ರಾಯವನ್ನು ತಿಳಿಯದೆ ಉತ್ತರವನ್ನು ಬರೆದಿರುವದು ಮಂದತನವೇ ಸರಿ !

( ೪೦—ಉ—ವಿ. ) " ಬಸವ ಶಬ್ದವು ಕನ್ನಡವಾಗಿದ್ದ ಪಕ್ಷದಲ್ಲಿ ಇವನ್ನು ಪಂಚಾ ಕ್ಷರ ಮಂತ್ರದಲ್ಲಿ ಮಿಶ್ರಮಾಡಿದ್ದು ಅನ್ಯಾಯವೆಂದು ನಾವಾದರೂ ಹೇಳುತ್ತಿದ್ದೆವು"

ಎಂದು ಬರೆದು ಒಳ್ಳೆನಿರಭಿಮಾನವನ್ನು ತೋರಿಸಿರುವಿ. ಇದು ಅತ್ಯಂತ ಸಂತೋಷವೇ ಸರಿ! ೩೬ ನೆಯ ವಿಮರ್ಶವನ್ನು ನೋಡು. ಬಸವ ಶಬ್ದವು ಶುದ್ಧ ಕನ್ನಡವೆಂದು ಕನ್ನಡ ಕೋಶಗಳ ಪ್ರಮಾಣಗಳಿಂದ ಸಿದ್ಧಮಾಡಿದೆ. ಇನ್ನು ಮೇಲಾದರೂ ಈ ಬಸವ ಶಬ್ದವು ಮಂತ್ರದಲ್ಲಿ ಸೇರಿದ್ದು ಅನ್ಯಾಯವೆಂಬ ಒಪ್ಪುವಿಯಾ?

(೪೧-ಉ-ವಿ) “ ಬಸವ–ಅ–ಉ– ಮ್– ಓಂ ನಮಃಶಿವಾಯ ” ಎಂಬೀ ಮಂತ್ರವು ನಿಜವಾದ ಮಂತ್ರವಾಗಿದ್ದರೆ ವೇದಗಳಲ್ಲಿಯೂ– ಆಗಮಗಳಲ್ಲಿಯೂ– ಉಪನಿಷತ್ತುಗಳಲ್ಲಿಯೂ– ವ್ಯಾಸೋಕ್ತ ಪುರಾಣಗಳಲ್ಲಿಯೂ ಹಾಗೂ ಪ್ರಾಚೀನ ವೀರಶೈವ ಸಂಸ್ಕೃತ ಧರ್ಮಗ್ರಂಥಗಳಲ್ಲಿಯೂ ಉಲ್ಲೇಖವಿರುವದೋ ಹೇಗೆ? ಎಂದು ಪ್ರಶ್ನೆ ಮಾಡಿದ್ದಕ್ಕೆ ಇಂಥ ಇಂಥ ವೇದೋಪನಿಷತ್ಪುರಾಣಾಗಮಾದಿಗಳಲ್ಲಿರುತ್ತದೆಂದು ಪ್ರಮಾಣಗಳನ್ನು ಕೊಟ್ಟು ಸರಿಯಾದ ಉತ್ತರವನ್ನು ಬರೆಯದೆ “ ಈ ಮಂತ್ರದ ನಿಜತತ್ವದಲ್ಲಿ ಯಾರಿಗೆ ಸಂದೇಹ ವಿರುವದೋ ಅವರು ನಿಜವಾದ ವೀರಶೈವರು ಅಲ್ಲೇ ಅಲ್ಲೆಂದು ಬರೆದಿರುವಿ ” ಹೀಗೆ ಬರೆಯುವದೇ ನಿನ್ನ ಉತ್ತರವೇನು? ಹಾಗಾದರೆ– ವೇದೋಪನಿಷದಾಗಮವಿರುದ್ಧವಾದ ಈ ಮಂತ್ರದಲ್ಲಿ ಯಾರು ವಿಶ್ವಾಸವನ್ನಿಡುವರೋ ಅವರು ನಿಜವಾಗಿ ಶುದ್ಧಸಾಂಪ್ರದಾಯದ ವೀರಶೈವರಲ್ಲವೇ ಅಲ್ಲವೆಂದು ಪುನಃ ಪ್ರಶ್ನವು ಹೊರಡುವದಲ್ಲವೇ? ಇರಲಿ, ಈ ಉತ್ತರದ ಸಂದರ್ಭದಲ್ಲಿ “ ಅಥಾತಃಸಂಪ್ರವಕ್ಷ್ಯಾಮಿ ವರ್ಣಭೇದ ವಿಧಿಂ ಪರಂ ” ಇತ್ಯಾದಿವಾತುಲಾಗಮದ ಶ್ಲೋಕಗಳನ್ನು ಉದಾಹರಿಸಿ ಅಕಾರಾದಿ ಕ್ಷಕಾರಾಂತಗಳಾದ ೫೧ ಅಕ್ಷರಗಳಿಂದ ಮಂತ್ರಗಳ ಉತ್ಪತ್ತಿಯಾಗಿರುವದರಿಂದಲೂ, ಆ ೫೧ ಅಕ್ಷರಗಳಲ್ಲಿಯೇ “ ಬ–ಸ–ವ ” ಎಂಬ ಅಕ್ಷರಗಳಾದರೂ ಬಂದಿರುವದರಿಂದಲೂ ಇವು ಮಂತ್ರಾತ್ಮಕಗಳೆಂದು ಬರೆದಿರುವಿ. ೫೧ ಅಕ್ಷರಗಳಲ್ಲಿ ಕೇವಲ ಮಂತ್ರಗಳೇಕೆ? ಇಡೀ ಜಗತ್ತಿನಲ್ಲಿ ಮಾತಾಡತಕ್ಕ ಯಾವತ್ತು ಭಾಷೆಯ ಮಾತುಗಳೂ ಬೈಗಳುಗಳೂ ೫೧ ಅಕ್ಷರಗಳಿಂದಲೇ ವ್ಯವಹರಿಸಲ್ಪಡುತ್ತವೆ. ಅಂದಮೇಲೆ ಅವುಗಳಿಗೆಲ್ಲ ಮಂತ್ರಗಳೆಂದೇ ಹೇಳಬೇಕಾಯಿತು. ಇನ್ನು “ ಬಕಾರಸ್ತು ತ್ರಿಮೂರ್ತಿಃಸ್ಯಾತ್ ” ಇತ್ಯಾದಿ ಶ್ಲೋಕಗಳಿಂದ ಬಕಾರ–ಸಕಾರ–ವಕಾರಗಳಿಗೆ ವರ್ಣದೇವತಾದಿಗಳನ್ನು ಹೇಳಿರುವಿ. ಇದರಂತೆ “ ಹಡಪ– ಅಗಸ– ಕುರುಬ– ಕುಂಬಾರ ” ಇತ್ಯಾದಿ ಶಬ್ದಗಳಿಗಾದರೂ ವರ್ಣ ದೇವತಾದಿಗಳನ್ನು ಹೇಳಬಹುದು. “ ಹಡಪ ” ಶಬ್ದವನ್ನು ನೋಡು. “ ಹಕಾರಂ ಶಿವಬೀಜಂ ಸ್ಯಾಚ್ಛುದ್ಧಸ್ಫಟಿಕಸನ್ನಿಭಂ | ಅಣಿಮಾದ್ಯಷ್ಟಸಿದ್ಧಿಂಚ ಭುಕ್ತಿಮುಕ್ತಿಪ್ರದಾಯಕಂ || ಡಕಾರಂ ಚೈಕನೇತ್ರಂಸ್ಯಾತ್ಪೀತಂಕಾಲ ಜಯಂಭವೇತ್ || ಪಕಾರಂ ಪರ್ಜಬೀಜಂ ಸ್ಯಾಚ್ಛುಕ್ಲಾಭಂ ವೃಷ್ಟಿಸಿದ್ಧಿದಂ || ” ಈ ಪ್ರಕಾರವಾಗಿ ವಾತುಲಾಗಮದ ವರ್ಣಭೇದಪಟಲ ಪ್ರಮಾಣಗಳಿಂದ “ ಹಡಪ ” ಶಬ್ದವಾದರೂ ಸರ್ವೋತ್ತಮ

ವಾದ ಮಂತ್ರವಾಯಿತು. ಈ ಹಡಪ ಶಬ್ದವನ್ನು ಪರಮಪವಿತ್ರವಾದ ಪಂಚಾಕ್ಷರೀಮಂತ್ರ ದಲ್ಲಿ ಮಿಶ್ರಮಾಡಿ ಜಪಿಸುವದು ಯೋಗ್ಯವಾಗುವದೋ ಹೇಗೆ ? ನೀನೆ ವಿಚಾರಿಸು ! ಇದ ರಂತೆ ಕನ್ನಡ ಬಸವ ಶಬ್ದ ಮಿಶ್ರಿತ ಮಂತ್ರವನ್ನು ಜಪಿಸುವದು ಶಾಸ್ತ್ರವಿರುದ್ಧವಲ್ಲವೇ ? ಈ ಉತ್ತರದಲ್ಲಿ "ಒಂದಾನೊಂದು ಆಗಮಪಟಲವೆಂಬ ಹಸ್ತಲಿಖಿತವಾದ ಪುಸ್ತಕದಲ್ಲಿ— ಸೃಷ್ಟಿರೂಪಜಪಂವಕ್ಷ್ಯೇ" ಇತ್ಯಾದಿ ಶ್ಲೋಕಗಳಿರುವವೆಂದು ಬರೆದಿರುವಿ. ಆಗಮದ ಹೆಸರನ್ನು ತೋರಿಸದೆ ಒಂದಾನೊಂದು ಆಗಮದ ಪಟಲವೆಂದರೆ ಆ ಆಗಮದ ಹೆಸರೇ "ಒಂದಾನೊಂದು" ಎಂದು ಇರುವದೇ ಹೇಗೆ? ಸುಮ್ಮನೆ ದುರಭಿಮಾನವನ್ನು ಸಾಧಿ ಸುವದಕ್ಕೋಸ್ಕರ ಇಷ್ಟು ಕಷ್ಟಪಡುವದನ್ನು ಬಿಟ್ಟು ಈ ಬಸವ ಮಂತ್ರವು ವೇದಾ ಗಮಗಳಲ್ಲಿಯೂ ಮಂತ್ರ ಗ್ರಂಥಗಳಲ್ಲಿಯೂ ಇಲ್ಲವೆಂದೂ ಬಸವನ ಕಾಲದ ಧೂರ್ತ ರಿಂದ ನಿರ್ಮಿತವಾಗಿರುವದೆಂದೂ ಒಪ್ಪಿ ನಿಜವಾದ ಮಂತ್ರದಲ್ಲಿ ವಿಶ್ವಾಸವಿಟ್ಟು ಅದರ ಸ್ವರೂ ಪವನ್ನು ಚನ್ನಾಗಿ ಅರಿತುಕೊಂಡು ಮುಕ್ತಿಭಾಗಿಯಾಗುವದು ಒಳಿತಲ್ಲವೆ ?

(೪೨—ಉ—ವಿ.) "ಓಂ ಹ್ರಾಂ ಶುದ್ಧ ಗುರುಬಸವ—ಓಂ ಹ್ರೀಂ ನಮಃ ಶಿವಾಯ ಗುರುವಿನಗುರುಬಸವ" ಇತ್ಯಾದಿ ಸಂಸ್ಕೃತ ಕನ್ನಡ ವಾಕ್ಯಗಳಿಂದ ಕೂಡಿದ ವೃಷಭಾಂಗನ್ಯಾಸವು ನಿಜವೆಂದು ಬರೆದಿರುವಿ. ಇದರ ಮೇಲಿಂದ ನಿನಗೆ ಅಂಗನ್ಯಾಸದ ಸ್ವರೂಪವೇ ಗೊತ್ತಿಲ್ಲವೆಂಬು ಸ್ಪಷ್ಟವಾಗಿ ತೋರುತ್ತದೆ. "ನಮಃ— ಸ್ವಾಹಾ— ವಷಟ್— ಹುಂ— ವೌಷಟ್— ಫಟ್—" ಎಂಬೀ ಆರು ಪಲ್ಲವಗ ಳನ್ನು ಓಂ ಹ್ರಾಂ ಶುದ್ಧ ಗುರುಬಸವ ಇತ್ಯಾದಿ ೭ ವಾಕ್ಯಗಳಲ್ಲಿ ಹ್ಯಾಗೆ ಯೋಜಿ ಸುವಿ? ಬಸವ— ಸವಬ— ವಬಸ— ಇತ್ಯಾದಿಶಬ್ದಗಳನ್ನು ಅಂಗನ್ಯಾಸದಲ್ಲಿ ಹ್ಯಾಗೆ ಸಂಬಂಧ ಮಾಡುವಿಯೆನ್ನುವದನ್ನು ವಿವರಿಸು! ಈ ನ್ಯಾಸದಲ್ಲಿದ್ದ "ಗುರುವಿನ ಗುರು ಬಸವ ಚರಕ್ಕೆ ಚರಾಚರ ಬಸವ" ಇತ್ಯಾದಿ ವಾಕ್ಯಗಳು ಸಂಸ್ಕೃತ ಭಾಷೆಯ ವೆಂದು ಬರೆದಿರುವಿ. ಮಹನೀಯನೇ ಈ ವಾಕ್ಯಗಳು ಸಂಸ್ಕೃತಗಳೆಂದು ಸಿದ್ಧಮಾಡಿ ತೋರಿಸಿದ್ದರೆ ಇಡೀ ಜಗತ್ತಿಗೆ ನೀನೊಂದು ದೊಡ್ಡ ಉಪಕಾರವನ್ನು ಮಾಡಿದಂತಾಗು ತ್ತಿತ್ತು. ಅಯ್ಯೋ— ನಿನ್ನ ಬುದ್ಧಿಗೆ ಬೆಂಕಿ ಹಚ್ಚಲಿ !

(೪೩—ಉ—ವಿ.) ಬಸವ ಮಂತ್ರವು ವೇದಾಗಮಾದಿಗಳಲ್ಲಿ ದೊರೆಯದೆ ಇದ್ದ ಮೇಲೆ ಈ ಮಂತ್ರವನ್ನು ತಿರಸ್ಕರಿಸುವದು ಅತ್ಯಂತ ಯೋಗ್ಯವಲ್ಲವೇ ಹೇಗೆ ?ಎಂದು ಪ್ರಶ್ನೆ ಮಾಡಿದ್ದಕ್ಕೆ ಸರಿಯಾದ ಉತ್ತರವನ್ನು ಬರೆಯದೆ, ಬಸವ ಮಂತ್ರವನ್ನು ಯಾರು ತಿರಸ್ಕರಿಸುವರೋ ಅವರಿಗೆ ನರಕದ ಹೊರತು ಬೇರೆ ಗತಿ ಯಾಗಲಾರದೆಂದು ಉತ್ತರವನ್ನು ಬರೆದಿರುವಿ. ಈ ಪ್ರಕಾರವಾಗಿ ಉತ್ತರವನ್ನು ಬರೆಯುವ ನಿನ್ನ ಪಾಪಮಯ ಬುದ್ಧಿಗೆ ಬೆಲೆಯಿಲ್ಲ! ಅಸ್ತು ! ಈ ಬಸವ ಮಂತ್ರವು ಕನ್ನಡ ಶಬ್ದಮಿಶ್ರಿತವಾದದ್ದೆಂದೂ, ವೇದೋ

ಷನಿಷದಾಗಮಾದಿಗಳಲ್ಲಿಲ್ಲದ್ದೆಂದೂ, ಸಮಸ್ತ ಮಂತ್ರಗ್ರಂಥಗಳಿಗೆ ವಿರುದ್ಧವಾದದ್ದೆಂದೂ, ಬಸವನ ಕಾಲದ ಧೂರ್ತರಿಂದ ಕಲ್ಪಿಸಲ್ಪಟ್ಟದ್ದೆಂದೂ ಹಿಂದೆ ತೋರಿಸಿರುತ್ತೇವೆ. ಶಾಸ್ತ್ರ ಸಿದ್ಧವಾದ ಪಂಚಪ್ರಭೇದಾತ್ಮಕ ಪಂಚಾಕ್ಷರೀ ಮಂತ್ರದಲ್ಲಿ ಭಕ್ತಿಯನ್ನಿಡದೆ, ಶಾಸ್ತ್ರವಿರುದ್ಧವಾದ ಈ ಅಮಂಗಲ ಮಂತ್ರದಲ್ಲಿ ಯಾರು ಭಕ್ತಿಯನ್ನಿಡುವರೋ ಅವರಿಗೆ ಯಾವಗತಿ ಯಾಗುವದೆನ್ನುವದನ್ನು ವಾಚಕರೇ ಊಹಿಸ ಬಹುದು.

(೪೪–ಉ–ವಿ) ಬಲದೇವನಿಗೂ ಬಸವನಿಗೂ ಪೂರ್ವದ ಸಂಬಂಧ ವಿತ್ತೇ ಹೇಗೆ? ಎಂದು ಪ್ರಶ್ನೆ ಮಾಡಿದ್ದಕ್ಕೆ ಪೂರ್ವವೆಂದರೆ ಬಸವನು ಹುಟ್ಟುವದಕ್ಕಿಂತ ಮೊದಲೋ ಅಥವಾ ಅವನು ಹುಟ್ಟಿದ ಮೇಲೋ? ಎಂದು ಶಂಕಾ ಮಾಡಿಕೊಂಡು, ಬಸವನು ಹುಟ್ಟುವದಕ್ಕಿಂತ ಮೊದಲು ಸಂಬಂಧವಿದ್ದಿಲ್ಲವೆಂದೂ ಲಗ್ನವಾಗುವಕಾಲಕ್ಕೆ ಸಂಬಂಧವಾಯಿತೆಂಬೂ ಅಭಿಪ್ರಾಯ ಪಟ್ಟಿರುವಿ. ಪೂರ್ವವೆಂದರೆ ಬಸವನು ಲಗ್ನವಾಗುವದಕ್ಕಿಂತಲೂ ಮೊದಲು– ಸಂಬಂಧವಿತ್ತೇ ಇಲ್ಲವೇ? ಇತ್ತೆಂದರೆ ಪರಮಾತ್ಮ ಹಿಮವಂತರ ದೃಷ್ಟಾಂತವನ್ನು ಕೊಟ್ಟು ಲೀಲಾಬಾಂಧವ್ಯವೆಂದು ಬರೆದಿರುವದು ಅಸಂಗತವಾಗುವದಿಲ್ಲವೇ ಹೇಗೆ? ಇದ್ದಿಲ್ಲವೆಂದರೆ– ೪೬ನೆಯ ಉತ್ತರದಲ್ಲಿ "ತಸ್ಯೋಪನಯನಂದ್ರಷ್ಟುಂ ಬಸವೇಶ್ವರಮಾತುಲಃ| ಬಲದೇವ ಇತಿಖ್ಯಾತೋ ಧರ್ಮಾತ್ಮಾ ಸಮುಪಸ್ಥಿತಃ" ॥ ಎಂಬೀ ಬಸವ ಪುರಾಣದ ಶ್ಲೋಕವನ್ನುದಾಹರಿಸಿ ಬಸವನ ಉಪನಯನವನ್ನು ಅವನ ಸೋದರಮಾವನಾದ ಬಲದೇವನು ನೋಡಲಿಕ್ಕೆ ಬಂದಿದ್ದನೆಂದು ಬರೆದಿರುವಿ. ಉಪನಯನವು ಲಗ್ನವಾಗುವದಕ್ಕಿಂತ ಮೊದಲೇ ಆಗುವದಲ್ಲವೇ? ಉಪನಯನ ಕಾಲದಲ್ಲಿಯೇ ಬಸವನಿಗೆ ಬಲದೇವನು ಸೋದರಮಾವನಾಗಿದ್ದ ಮೇಲೆ ಲಗ್ನಕ್ಕಿಂತ ಪೂರ್ವದಲ್ಲಿ ಬಸವನಿಗೂ ಹಾಗೂ ಬಲದೇವನಿಗೂ ಬಾಂಧವ್ಯವಿದ್ದಿಲ್ಲವೆಂದು ಬರೆಯುವದು ಹಾಸ್ಯಾಸ್ಪದವಲ್ಲವೇ? ಇರಲಿ; ಈ ಸಂಧರ್ಭದಲ್ಲಿ– ಶ್ರೀಜಗದ್ಗುರು ರೇಣುಕಾಚಾರ್ಯರಿಗೂ ಹಾಗೂ ರಾಜೇಂದ್ರಚೋಲ ವೀರಬಿಜ್ಜಲನರೇಶರಿಗೂ ಬಾಂಧವ್ಯವನ್ನು ತೋರಿಸಿರುವದು ಅಸಂಬದ್ಧ ಪ್ರಲಾಪವೇ ಸರಿ! ಯಾಕಂದರೆ– ಶ್ರೀಜಗದ್ಗುರು ರೇಣುಕಾಚಾರ್ಯರು ವಿವಾಹಿತರಾಗಿದ್ದರೆಂದು ರೇಣುಕವಿಜಯ– ಸಿದ್ಧಾಂತ ಶಿಖಾಮಣಿ ಮೊದಲಾದ ಯಾವ ಪ್ರಾಚೀನ ಗ್ರಂಥಗಳಲ್ಲಿಯೂ ಉಲ್ಲೇಖವಿರುವದಿಲ್ಲ. ಆದರೆ ಈಗ್ಯೆ ಸುಮಾರು ಮೂರು ನೂರು ವರ್ಷಗಳಿಂದೀಚಿನ ಕೆಲವು ಕನ್ನಡ ಕವಿಗಳು ತಮ್ಮ ತಮ್ಮ ಮನಸ್ಸಿಗೆ ಬಂದಂತೆ ಕನ್ನಡದಲ್ಲಿ ಚರಿತ್ರಗಳನ್ನು ಬರೆದಿರುತ್ತಾರೆ. ಅವು ಪ್ರಮಾಣ ಭೂತಗಳೆನಿಸುವದಿಲ್ಲ. ಯಾಕಂದರೆ ಈ ಕವಿಗಳು ಶ್ರೀರೇಣುಕಾಚಾರ್ಯರು ಸಿದ್ಧರಾಮನ ಮನೆಗೆ ಹೋಗಿದ್ದರೆಂದು ಬರೆಯುತ್ತಾರೆ. ಇದು ನಿಜವಾಗಬಹುದೇ? ಸಿದ್ಧರಾಮನು ಈಗ್ಯೆ ೭೦೦ ವರ್ಷಗಳ ಪೂರ್ವದಲ್ಲಿದ್ದನು. ಆದರೆ ಶ್ರೀರೇಣುಕಾಚಾರ್ಯರು ಆ ಕಾಲದಲ್ಲಿ ಭೂಮಂಡಲ

ದಲ್ಲಿದ್ದರೋ ? ಈಗ್ಯೆ ೧೧೦೦ ವರ್ಷಗಳ ಪೂರ್ವದಲ್ಲಿದ್ದ ಶ್ರೀಪತಿಪಂಡಿತರು ತಮ್ಮಿಂದ ರಚಿಸಲ್ಪಟ್ಟ ಶ್ರೀಕರಭಾಷ್ಯದಲ್ಲಿ ಅನೇಕ ಕಡೆಗೆ ಸಿದ್ಧಾಂತಶಿಖಾಮಣಿಯ ಪ್ರಮಾಣಗಳನ್ನು ಉದಾಹರಿಸಿದ್ದಾರೆ. ಆಂದಮೇಲೆ ಸಿದ್ಧಾಂತ ಶಿಖಾಮಣಿಕಾರರು ಶ್ರೀಪತಿ ಪಂಡಿತರಿಗಿಂತಲೂ ಎಷ್ಟೋ ಮೊದಲನೆಯವರೆಂದು ಸಿದ್ಧವಾಗುತ್ತದೆ. ಸಿದ್ಧಾಂತ ಶಿಖಾಮಣಿಕಾರರು ತಮ್ಮ ಗ್ರಂಥದಲ್ಲಿ ತಮ್ಮ ವಂಶಪರಂಪರೆಯನ್ನು ಬರೆದುಕೊಳ್ಳುವ ಕಾಲಕ್ಕೆ ತಮ್ಮ ವಂಶದ ಮೂಲ ಪುರುಷರು **ಶಿವಯೋಗಿ ಶಿವಾಚಾರ್ಯ**ನೆಂದೂ, ಅವನ ವಂಶದಲ್ಲಿ **ಮುದ್ದದೇವಾಚಾರ್ಯನು** ಜನಿಸಿದನೆಂದೂ, ಈ ಮುದ್ದದೇವಾಚಾರ್ಯನ ಪುತ್ರನು **ಸಿದ್ಧನಾಥ ಶಿವಾಚಾರ್ಯ**ನೆಂದೂ, ಈ ಸಿದ್ಧನಾಥ ಶಿವಾಚಾರ್ಯನ ಪುತ್ರನೇ **ಗ್ರಂಥಕರ್ತನಾದ ತಾನೆಂದೂ** ಮೂಲ ಶ್ಲೋಕಗಳಿಂದ ಸ್ಪಷ್ಟವಾಗಿ ಕನ್ನಡಿಯಂತೆ ತೋರಿಸಿರುತ್ತಾರೆ. ಹೀಗಿದ್ದಾಗ್ಯೂ ಸಿದ್ಧಾಂತ ಶಿಖಾಮಣಿಯ ವ್ಯಾಖ್ಯಾನ ಕಾರರಾದ ಮರಿತೋಂಟದಾರ್ಯರು ಇದರ ನಿಜತತ್ವವನ್ನು ತಿಳಿಯದೆ ಸಿದ್ಧರಾಮನವಂಶಜರೆಂದು ಭ್ರಾಂತಿಯಿಂದ ಬರೆದಿರುತ್ತಾರೆ. ಇರಲಿ ; ಇಂಥ ಅತಿ ಪ್ರಾಚೀನವಾದ ಸಿದ್ಧಾಂತ ಶಿಖಾಮಣಿಯಲ್ಲಿಯೇ ಶ್ರೀಜಗದ್ಗುರು ರೇಣುಕಾಚಾರ್ಯರು ಕೊಲ್ಲಿಪಾಕಿಗೆ ದಯ ಮಾಡಿಸಿ ಶ್ರೀ ಸೋಮನಾಥ ಲಿಂಗದಲ್ಲಿ ಅಂತರ್ಧಾನರಾದರೆಂಬ ವಿಷಯವು ಸ್ಪಷ್ಟವಾಗಿ ಹೇಳಲ್ಪಟ್ಟಿರುವದು. ಅಂದಮೇಲೆ ಸಿದ್ಧರಾಮನ ಕಾಲದಲ್ಲಿ ಶ್ರೀರೇಣುಕಾಚಾರ್ಯರಿದ್ದರೆಂದು ಪ್ರತಿಪಾದಿಸುವ ಕನ್ನಡ ಪುರಾಣಗಳು ಎಷ್ಟರ ಮಟ್ಟಿಗೆ ಪ್ರಮಾಣಗಳಾಗಿರಬಹುದೆನ್ನುವದನ್ನು ನೀನೇ ಆಲೋಚಿಸು ! ಈಗ್ಯೆ ೧೧೦೦ ವರ್ಷಗಳ ಪೂರ್ವದಲ್ಲಿದ್ದ ಶ್ರೀಪತಿ ಪಂಡಿತರು ತಮ್ಮ ಶ್ರೀಕರಭಾಷ್ಯದ ಆದಿಯಲ್ಲಿ— “ ಶ್ರೀಮಚ್ಛಿವಾಚಾರ ವಿಚಾರದಕ್ಷಂ ಸ್ವಶಿಷ್ಯ ಸತ್ರೀಣನ ಪೂರ್ಣಪಕ್ಷಂ । ದುರ್ವಾರಕಾಮಾದಿವಿದಾರದಕ್ಷಂ ಭಜಾಮ್ಯಹಂರೇವಣ ಕಲ್ಪವೃಕ್ಷಂ ॥ ” ಎಂದು ಶ್ರೀರೇಣುಕಾಚಾರ್ಯರನ್ನು ಸ್ತುತಿಸಿದ್ದಾರೆ. ಇದರಲ್ಲಿ “ **ದುರ್ವಾರಕಾಮಾದಿವಿದಾರದಕ್ಷಂ** ” ಎಂದು ಈ ಆಚಾರ್ಯ ಪುಂಗವರಿಗೆ ವಿಶೇಷಣವನ್ನು ಕೊಟ್ಟಿರುವದರಿಂದ ಇವರ ವಿಷಯದಲ್ಲಿ ವಿವಾಹ ಸಂಬಂಧವನ್ನು ಕಲ್ಪಿಸುವದು ಕೇವಲ ಅನ್ಯಾಯವಲ್ಲವೇ ಹೇಗೆ? ನೀನೇ ವಿಚಾರಿಸು ! ಈ ಜಗದ್ಗುರುಗಳ ಸಂಪೂರ್ಣ ಸಚ್ಚರಿತ್ರವನ್ನು ತಿಳಿದುಕೊಳ್ಳಬೇಕಾದರೆ “ **ಶ್ರೀರೇಣುಕ ವಿಜಯ** ” ವೆಂಬ ಪ್ರಾಚೀನ ಸಂಸ್ಕೃತಗ್ರಂಥವನ್ನು ನೋಡಿ ಭ್ರಾಂತಿಯಿಂದ ದೂರನಾಗು !

(೪೫—ಉ—ವಿ.) ಬಲದೇವನ ಮಗಳಾದ ಗಂಗವ್ವನಿಗೆ ವೀರಶೈವ ಶಾಸ್ತ್ರವಿಧಿಗನುಸಾರವಾಗಿ ಹುಟ್ಟಿದ ಕೂಡಲೆ ಲಿಂಧಾರಣ ವಾಗಬೇಕಾಗಿತ್ತು ; ಹೀಗಾಗದೆ ಲಗ್ನವಾಗುವ ಕಾಲಕ್ಕೆ ಸಂಗಮೇಶ್ವರನು ಲಿಂಗವನ್ನು ಧರಿಸಿದನೆಂದು ಬಸವ-ಪುರಾಣದಲ್ಲಿ ಬರೆದಿರುತ್ತದೆ. ಇದಕ್ಕೆ ಸಮಾಧಾನವೇನೆಂದು ಪ್ರಶ್ನ ಕರ್ತನು ಕೇಳಿದ್ದಕ್ಕೆ— ಹುಟ್ಟಿದ ಕೂಡಲೆ ಲಿಂಗಧಾರಣವಾಗಿತ್ತೆಂದು ಪ್ರಮಾಣಗಳನ್ನು ಕೊಟ್ಟು ಸಿದ್ಧಮಾಡದೆ ವಿವಾಹ ಸಮ

ಯದಲ್ಲಿ ವಿಧಿಗನುಸರಿಸಿ ಸಂಗಮೇಶನು ದೀಕ್ಷೆಯನ್ನು ಮಾಡಿದನೆಂದು ಉತ್ತರವನ್ನು ಬರೆದಿರುವಿ; ಇದು ಸರಿಯಾದ ಉತ್ತರವಾಗುವದೋ ? ನೀನೇ ನೋಡು. ಹುಟ್ಟಿದ ಕೂಡಲೆ ಲಿಂಗಧಾರಣವನ್ನು ಮಾಡದೆ ಒಮ್ಮೆಲೆ ವಿವಾಹ ಸಮಯದಲ್ಲಿ ದೀಕ್ಷಾ ಪೂರ್ವಕ ಲಿಂಗ ಧಾರಣವನ್ನು ಮಾಡುವದು ಶಾಸ್ತ್ರ ವಿಹಿತವೇ ಹೇಗೆ? ಶಾಸ್ತ್ರವಿಹಿತವೆಂದರೆ ಸಿದ್ಧಮಾಡು?

(೪೬–೪೭–ಉ–ವಿ) ಬಸವನು ಯಾವ ಗೋತ್ರದವನಿದ್ದನೆಂದು ಪ್ರಶ್ನೆ ಮಾಡಿದ್ದಕ್ಕೆ ಇವನು ನಂದೀಶ್ವರನ ಅವತಾರಿಯಾದ ಕಾರಣ **ನಂದಿಗೋತ್ರ**ದವನಿದ್ದನೆಂದು ಬರೆದಿರುವಿ. ತಾನು ತನ್ನ ಗೋತ್ರವನ್ನೇ ಹೇಳುವದು ಯಾವ ಶಾಸ್ತ್ರದಲ್ಲಿ ಪ್ರತಿಪಾದಿತವಾಗಿರುವದು ? ಹೀಗೆ ಬರೆದರೆ ಜನರು ನಕ್ಕಾರೆಂಬ ಭೀತಿಯಾದರೂ ಉತ್ಪನ್ನವಾಗಲಿಲ್ಲವೇ ? ಇದರ ಮೇಲಿಂದ ನಿನಗೆ **ಗೋತ್ರಸೂತ್ರಗಳ** ಲಕ್ಷಣವೇ ಗೊತ್ತಿಲ್ಲವೆಂದು ಸ್ಪಷ್ಟವಾಗಿ ತೋರುತ್ತದೆ. ಬಸವನು ನಂದೀಶ್ವರನ ಅವತಾರಿಯಾಗಿದ್ದರಿಂದ ಇವನು ನಂದೀಗೋತ್ರದವನಿದ್ದನೆಂದು ಬಹು ಬುದ್ಧಿಯನ್ನು ಖರ್ಚುಮಾಡಿ ಉತ್ತರವನ್ನು ಹೇಳಿದ ಮೇಲೆ ನಂದೀಶ್ವರನ ಅವತಾರಿಯಾಗದೆ ಇದ್ದ ಇವನ ತಂದೆಯು ಯಾವ ಗೋತ್ರದವನೆಂದು ಹೇಳುವಿ? ಇವನ ಸೋದರಮಾವನಾದ ಬಲದೇವನು ಯಾವ ಗೋತ್ರದವನೆಂದು ಹೇಳುವಿ? ಸಂಗಮೇಶ್ವರನು ವಿವಾಹ ಸಮಯದಲ್ಲಾಗತಕ್ಕ ಪಂಚಕಲಶ ಸ್ಥಾಪನೆಯಲ್ಲಿ ನಂದಿಗೋತ್ರೋತ್ಪನ್ನರಾದ ಗುರುಗಳ ಕಲಶವನ್ನು ಮಧ್ಯದಲ್ಲಿ ಸ್ಥಾಪಿಸಿ ವಿವಾಹವನ್ನು ಮಾಡಿದನೆಂದು ಬರೆದಿರುವಿ ; ಸಂಗಮೇಶ್ವರನು ನಂದಿಗೋತ್ರದ ಗುರು ಕಲಶವನ್ನು ಮಧ್ಯದಲ್ಲಿ ಸ್ಥಾಪಿಸಿ ವಿವಾಹವನ್ನು ಮಾಡಿದನೆಂದು ಬರೆದಿರುವಿ; ಸಂಗಮೇಶ್ವರನು ನಂದಿಗೋತ್ರದ ಗುರುಕಲಶವನ್ನು ಮಧ್ಯದಲ್ಲಿ ಸ್ಥಾಪಿಸಿದಮೇಲೆ ಗುರುವಾಗಿದ್ದ ತಾನಾದರೂ ನಂದಿಗೋತ್ರದವನಾಗಬೇಕಾಯಿತಲ್ಲವೇ? ಇವನು ನಂದಿಗೋತ್ರದವನಿದ್ದನೇಕು? ಮಧ್ಯದ ಗುರುಕಲಶಕ್ಕೆ ಸಂಗಮೇಶ್ವರನು ಅಧಿದೇವತೆಯಾದ ಮೇಲೆ ಉಳಿದ ನಾಲ್ಕು ಕಲಶಗಳಿಗೆ ಯಾರು ಅಧಿದೇವತೆಗಳಾಗಿದ್ದರೆನ್ನುವದನ್ನು ಹೇಳ ಬಲ್ಲೆಯಾ? ಇದನ್ನೆಲ್ಲ ವಿಚಾರ ಮಾಡದೆ ಒಂದಕ್ಕೊಂದು ಸಂಬಂಧವಿಲ್ಲದಂತೆ ಉತ್ತರವನ್ನು ಬರೆದಿರುವದು ಮಹಾಮಂದಮತಿಯ ಲಕ್ಷಣವೇ ಸರಿ!

(೪೮–ಉ–ವಿ.) ೪೭ ನೆಯ ಉತ್ತರವನ್ನು ನೋಡೆಂದು ಬರೆದಿರುವಿ. ನೀನಾದರೂ ೪೭ನೆಯ ವಿಮರ್ಶವನ್ನು ನೋಡು.

(೪೯–ಉ–ವಿ.) ಬಸವನಿಗೆ ನಿರಧಿಕರಣ ದೀಕ್ಷೆಯಾಗಿದ್ದಿಲ್ಲವೆಂದು ೧೯ನೆಯ ವಿಮರ್ಶದಲ್ಲಿ ಸ್ಪಷ್ಟಗೊಳಿಸಿದೆ. ನೋಡು.

(೫೦–ಉ–ವಿ.) ಬಸವನಿಗೆ ಸಂಗಮೇಶ್ವರನೇ ದೀಕ್ಷೆಯನ್ನು ಮಾಡಿದನೆಂದು

ಬಸವ ಪುರಾಣದಲ್ಲಿ ಬರೆದಿರುತ್ತದೆ. ಆದರೆ ಪ್ರಭುಲಿಂಗಲೀಲೆಯಲ್ಲಿ ನನ್ನ ಉಪನಯನ ವನ್ನು ಮಾಡುವವನು ಅಲ್ಲಮನೇ ಹೊರತು ಬೇರೊಬ್ಬ ನಿಲ್ಲವೆಂದು ಬಸವನೇ ಆಡಿ ತೋರಿ ಸಿದ್ದಾನೆ. ಅಂದಮೇಲೆ ಬಸವನ ದೀಕ್ಷಾಗುರುವು ಸಂಗಮೇಶ್ವರನೋ ಅಥವಾ ಅಲ್ಲ ಮನೋ? ಎಂದು ಪ್ರಶ್ನ ಮಾಡಿದ್ದಕ್ಕೆ-- ಸರಿಯಾದ ಉತ್ತರವನ್ನು ಬರೆಯದೆ ನಿನ್ನ ದುರು ದ್ದೇಶವನ್ನು ಸಾಧಿಸುವದಕ್ಕೋಸ್ಕರ "**ಉಪನಯನ**" ವೆಂದರೆ **ಜ್ಞಾನೋಪದೇಶ** ವೆಂದು ಅರ್ಥವನ್ನು ಮಾಡಿಕೊಂಡು ಅಲ್ಲಮನು ಬಸವನಿಗೆ ಜ್ಞಾನೋಪದೇಶವನ್ನು ಮಾಡಿ ದನೆಂದು ಬರೆದಿರುವಿ; ಪ್ರಭುಲಿಂಗಲೀಲೆಯ ೯ನೆಯ ಅಧ್ಯಾಯವನ್ನು ಚನ್ನಾಗಿ ಕಣ್ತೆ ರದು ನೋಡು. "ಅಥಗರ್ಭಾಷ್ಟಮೇ ಕಾಲೇ ದಂಪತೀಹೃಷ್ಟ ಮಾನಸೌ | ಬಸವಸ್ಯೋ ಪನಯನಂ ಕರ್ತುಕಾಮೌಬಭೂವತುಃ || ತದ್ವಿಜ್ಞಾಯಾಥ ಬಸವಃ ಪಿತ್ರಾಸ್ಸಂವಾದ್ಯನಿಃ ಸ್ಪೃಹಃ | ನಾಗಾಂಬಿಕಾಂ ಸ್ವಭಗಿನೀಂಪ್ರಾಹಸ್ವ ಸ್ವಾನುರಾಗಿಣೀಂ || ಉಪಾಧ್ಯಾಯೋ ಗುರುಃ ಸ್ವಾಮೀಮಮಾಚಾರ್ಯಶ್ಚ ದೇಶಿಕಃ। ಅಲ್ಲಮ ಪ್ರಭುರೇವೈಕಃ ಸಹಿಮಾಮುಪ ನೇಷ್ಯತಿ। ಮಮೋಪನೇತಾನಾಸ್ತ್ಯನ್ಯಃ ಪ್ರಭುಂಸರ್ವೇಶ್ವರಂವಿನಾ || ಎಂಬೀ ಶ್ಲೋಕಗಳಿ ಂದ **೮ನೆಯ ವರ್ಷದಲ್ಲಾಗತಕ್ಕ ತನ್ನ ಉಪನಯನವನ್ನು** ಅಲ್ಲಮನೇ ಮಾಡುವವನೆಂದು ಬಸವನು ಸ್ಪಷ್ಟವಾಗಿ ಆಡಿ ತೋರಿಸಿದ್ದಾನೆ. ಹೀಗಿದ್ದಾಗ್ಯೂ ಇದರ ಅರ್ಥವನ್ನು ತಿಳಿಯದೆ ಉಪನಯನವೆಂದರೆ ಜ್ಞಾನೋಪದೇಶವೆಂದು ಅರ್ಥವನ್ನು ಮಾಡಿ ಕೊಂಡಿರುವದು ನಿನ್ನ ವಿಕಟ ಪಾಂಡಿತ್ಯಕ್ಕೆ ಭೂಷಣವೇ ಸರಿ! **ವಿಕಟಪಂಡಿತನೇ**— ೮ನೆಯ ವರ್ಷದಲ್ಲಿ ಮಾಡತಕ್ಕ ದೀಕ್ಷಾ ಕರ್ಮಕ್ಕೆ ಶಾಸ್ತ್ರಕಾರರು "**ಉಪನಯನ**" ವೆನ್ನುತ್ತಾರೆಯೋ ಹೊರತು ಬೇರೊಂದಕ್ಕನ್ನುವದಿಲ್ಲವೆಂದು ತಿಳಿ! ೪೬ನೆಯ ಉತ್ತರದಲ್ಲಿ ನೀನೇ— "ತಸ್ಯೋಪನಯನಂದ್ರಷ್ಟುಂ ಬಸವೇಶ್ವರ ಮಾತುಲಃ। ಬಲದೇವ ಇತಿಖ್ಯಾತೋ ಧರ್ಮಾತ್ಮಾ ಸಮುಪಸ್ಥಿತಃ ||" ಎಂಬ ಶ್ಲೋಕವನ್ನು ಉದಾಹರಿಸಿರುವಿ. ಆಸಂದರ್ಭ ದಲ್ಲಿ ಉಪನಯನವೆಂದರೆ ಜ್ಞಾನೋಪದೇಶವೆಂದು ಅರ್ಥವನ್ನು ಮಾಡುವಿಯೋ ಹೇಗೆ? ಒಂದಕ್ಕೊಂದು ಸಂಬಂಧವಿಲ್ಲದ ನಿನ್ನ ಉತ್ತರಗಳ ವರ್ಣನವನ್ನು ಮಾಡಲಿಕ್ಕೆ ಆದಿಶೇಷ ನೂ ಕೂಡ ಸಮರ್ಥನಾಗಲಾರನು! ಇರಲಿ; ಬಸವನಿಗೆ ಆದಿಯಲ್ಲಿಯೇ **ವಿಜ್ಞಾನಕಲ ರಿಗೆ ಆಗತಕ್ಕ ನಿರಧಿಕರಣ ದೀಕ್ಷೆ**ಯಾಗಿತ್ತೆಂದು ಮೇಲಿಂದಮೇಲೆ ಬಡಬಡಿಸುವಿ ಯಷ್ಟೆ! ಬಸವನು ಕೇವಲ ಜ್ಞಾನಮಯ ನಿರಧಿಕರಣ ದೀಕ್ಷಾಯುಕ್ತನಾದ ಮೇಲೆ ಇವ ನಿಗೆ ಪುನಃ ಅಲ್ಲಮನ ಜ್ಞಾನೋಪದೇಶವೇಕೆ ಬೇಕಾಗಿತ್ತು? ಇವನಿಗಾದ ನಿರಧಿಕರಣ ದೀಕ್ಷೆಯ ಸ್ವರೂಪವೊಂದು ಬೇರೆಯಾಗಿರ ಬಹುದು! ಅಸ್ತು! ಈ ಉತ್ತರದಲ್ಲಿ "**ಜ್ಞಾ ನೋಪದೇಶಃ ಕರ್ತವ್ಯೋನಚಕ್ರಿಯೋಪದೇಶಕೃತ್। ನಿರಾಧಾರಾವೀರ ಶೈವಾಃ ಸರ್ವೇ ವಂದ್ಯಾನಸಂಶಯಃ** ||" ಎಂಬ ಶ್ಲೋಕವನ್ನು ಉದಾಹರಿಸಿ ರುವಿ; ಈ ಶ್ಲೋಕದ ಕವಿತಾ ರಚನೆಯನ್ನೂ ವ್ಯಾಕರಣ ರೀತಿಯನ್ನೂ ಹಾಗೂ ಅರ್ಥ

ಗಾಂಭೀರ್ಯವನ್ನೂ ವರ್ಣಿಸಲಿಕ್ಕೆ ಬ್ರಹ್ಮನೂ ಕೂಡ ಸಮರ್ಥನಾಗಲಾರನು. ಒಂದೇ ವಸ್ತುವಿಗೆ ೧ನೆಯ ಚರಣದಲ್ಲಿ ತೃತಿಯಾ ವಿಭಕ್ತಿಯ ಸಂಬಂಧವೂ, ೨ನೆಯ ಚರಣದಲ್ಲಿ ಪ್ರಥಮಾ ವಿಭಕ್ತಿಯ ಏಕವಚನವೂ, ೩ನೆಯ ಚರಣದಲ್ಲಿ ಅದೇ ವಸ್ತುವಿಗೆ ಪ್ರಥಮಾ ವಿಭಕ್ತಿಯ ಬಹುವಚನವೂ ಇರುವದರಿಂದ ಇಂಥ ಮಹಾ ಶ್ಲೋಕವನ್ನು ಯಾವನೋಬ್ಬ ದೀಡಪಂಡಿತನು ರಚಿಸಿ ಆಗಮಶ್ಲೋಕವೆಂದು ಬರೆದು ಶಿವನ ಹೆಸರಿಗೆ ಕಲಂಕವನ್ನು ತಂದಿದ್ದಾನೆ. ಇಂಥಶ್ಲೋಕ ಮಾಲಿಕೆಯೇ ನಿನಗೆ ಪ್ರಮಾಣವಾಗಿದೆ. ಸಾಧು ! ಸಾಧು !!

(೩೧-ಉ-ವಿ.) ೫೦ನೆಯ ಉತ್ತರವನ್ನು ನೋಡೆಂದು ಬರೆದಿರುವಿ. ನೀನಾದರೂ ೫೦ನೆಯ ವಿಮರ್ಶವನ್ನು ನೋಡು.

(೩೨-ಉ-ವಿ.) ಬಸವನಿಗೆ ಸಂಸ್ಕೃತ ವಿದ್ಯೆಯು ಬರುತ್ತಿತ್ತೋ ಇಲ್ಲವೋ? ಬರುತ್ತಿತ್ತೆಂದರೆ ಅವನು ಸಂಸ್ಕೃತದಲ್ಲಿ ಯಾವ ಯಾವ ಗ್ರಂಥಗಳನ್ನು ಬರೆದಿರುವನು? ತೋರಿಸೆಂದು ಪ್ರಶ್ನ ಮಾಡಿದ್ದಕ್ಕೆ ಅವನು ಇಂಥ ಇಂಥ ಸಂಸ್ಕೃತ ಗ್ರಂಥಗಳನ್ನು ಬರೆದಿರುವನೆಂದು ಉತ್ತರವನ್ನು ಬರೆಯದೆ ಸುಮ್ಮನೆ ಅನುಮಾನವನ್ನು ಮಾಡುತ್ತ ಇವನಿಗೆ ಸಂಸ್ಕೃತ ವಿದ್ಯೆಯು ಬರುತ್ತಿತ್ತೆಂದು ಹರಟೆಯನ್ನು ಕೊಚ್ಚಿರುವಿ. ಈ ವಿಷಯದಲ್ಲಿ– ಅವನು ವೇದಾಗಮಾದಿಗಳ ತತ್ವಗಳಿಗನುಸಾರವಾಗಿ ವಚನವನ್ನು ಬರೆದಿರುವ ಕಾರಣ ಅವನಿಗೆ ಸಂಸ್ಕೃತವು ಬರುತ್ತಿತ್ತೆಂದು ಊಹಿಸುವಿಯಷ್ಟೆ! ಹಾಗಾದರೆ ಶಿಶುನಾಳಸರೀಬಸಾಹೇಬ ಮೊದಲಾದವರು ವೇದಾಗಮೋಕ್ತಗಳಾದ ಉದಾತ್ತ ತತ್ವಗಳನ್ನು ತಮ್ಮ ಪದಗಳಲ್ಲಿ ತುಂಬಿರುವರು. ಅಂದಮೇಲೆ ಅವರಾದರೂ ಕ್ರಮಪ್ರಕಾರವಾದ ವೇದಾಗಮಾದಿಗಳ ಅಭ್ಯಾಸವನ್ನು ಮಾಡಿ ಅವುಗಳ ರಹಸ್ಯವನ್ನು ತಿಳಿದಿದ್ದರೆಂದು ಹೇಳಬೇಕಾದೀತಲ್ಲವೇ? ಈ ಸರೀಬಸಾಹೇಬಾದಿಗಳು ಮೃತರಾದ್ದರಿಂದ ದುರಭಿಮಾನಿಯಾದ ನೀನು ಅವರಿಗಾದರೂ ಸಂಸ್ಕೃತಭಾಷೆಯು ಬರುತ್ತಿತ್ತೆಂದು ಹೇಳದೆ ಬಿಡಲಿಕ್ಕಿಲ್ಲ! ಅದಿರಲಿ; ಸದ್ಯಕ್ಕೆ ಗೋಕಾಕದ ಶಿವಲಿಂಗಯ್ಯ ನೆಂಬವನು ಅನೇಕ ತತ್ವಪದಗಳನ್ನು ಮಾಡುತ್ತಿರುವನು. ಅವನ ಪದಗಳಲ್ಲಿ ನಿಮ್ಮ ಬಸವನ ವಚನದ ತತ್ವಗಳಿಗಿಂತಲೂ ಉದಾತ್ತತತ್ವಗಳು ಕಂಡು ಬರುತ್ತವೆ. ಅಂದಮೇಲೆ ಆಶಿವಲಿಂಗಯ್ಯನಿಗೆ ಸಂಸ್ಕೃತ ವ.ಯ ವೇದಾಗಮಗಳ ಜ್ಞಾನವಿರುವದೆಂದು ಹೇಳಬೇಕಾದೀತೇ ಹೇಗೆ? ಅಸ್ತು! ಈ ಬಸವನ ವಚನವು ವೇದಾಗಮಾದಿಗಳಿಗೆ ಸಮ್ಮತವಿರುವದಿಲ್ಲ; ಯಾಕಂದರೆ–ಇವನ ವಚನದಲ್ಲಿ ಕೇವಲ ಜಾತಿಸಾಂಕರ್ಯವು ತುಂಬಿ ತುಳುಕುತ್ತದೆ. ಈ ರೀತಿಯಾದ ಜಾತಿಸಾಂಕರ್ಯವು ವೇದಾಗಮಗಳಲ್ಲಿ ಹೇಳಿರುವದಿಲ್ಲ. ಆದಕಾರಣ ಇವನು ವೇದಾಗಮವಿರೋಧಿಯೂ ಸಂಸ್ಕೃತ ವಿದ್ಯಾಶೂನ್ಯನೂ ಆಗಿದ್ದನೆಂದು ಹೇಳಲು ಸಂದೇಹವಿಲ್ಲ. ಕಾಲ್ಯ

ದಾಸಾದಿಗಳ ವಿಷಯದಲ್ಲಿ ಪ್ರಶ್ನವನ್ನು ಮಾಡಿಕೊಂಡಿರುವಿಯಷ್ಟೆ! ಸಂಸ್ಕೃತವಿದ್ಯಾವಿಶಾರದರಾದ ಕಾಲಿದಾಸಾದಿಗಳು ದೇವಾಂಶ ಸಂಭೂತರೆಂದು ಹೇಳಲು ಏನೂ ಅಭ್ಯಂತರವಿಲ್ಲ! ವಚನವನ್ನು ಬರೆದ ಬಸವನಿಗೆ ದೇವತಾ ಸಾರ್ವಭೌಮನೆಂದು ಬರೆದಿರುವಿಯಷ್ಟೆ! ಹಾಗಾದರೆ ಈಗ ತತ್ವಪದಗಳನ್ನು ಮಾಡುತ್ತಿರುವ ಯಾವತ್ತು ಜನರಿಗೂ ದೇವತಾ ಸಾರ್ವಭೌಮ ಶಿಖಾಮಣಿಗಳೆನ್ನುವದರಲ್ಲಿ ತಿಲಾಂಶವಾದರೂ ಬಾಧಕವು ಬರಲಾರದು!

(೫೩–೮–೭.) ಸಂಸ್ಕೃತ ಕಲಿಯುವ ಸಾಲೆಯ ಅಧ್ಯಯನವರು ಸಂಸ್ಕೃತ ಶ್ಲೋಕಗಳನ್ನು ಉದಾಹರಿಸುವಂತೆ ಬಸವನಾದರೂ ತನ್ನ ವಚನದಲ್ಲಿ ಸಂಸ್ಕೃತ ಶ್ಲೋಕಗಳನ್ನು ಉದಾಹರಿಸಿರುವನೆಂದು ಪ್ರಶ್ನ ಕರ್ತನು ಬರೆದದ್ದಕ್ಕೆ– ನೀವು ಆ ಪ್ರಶ್ನದ ಅಭಿಪ್ರಾಯವನ್ನು ತಿಳಿಯದೆ “ ಸಂಸ್ಕೃತವನ್ನು ತಿಳಿಯದ ಲೇಖಕರು ಅವುಗಳನ್ನು ಅಶುದ್ಧವಾಗಿ ಬರೆದರೆ ಅದಕ್ಕೆ ಬಸವೇಶ್ವರನೇನು ಮಾಡುವನು ? ” ಎಂದು ಉತ್ತರವನ್ನು ಬರೆದು ಪ್ರಶ್ನ ಕರ್ತನಿಗೆ ಮುಸಲಾಗ್ರಬುದ್ಧಿಯೆಂದು ಅಂದು ಕೊಂಡಿರುವಿ. ಆದರೆ ಪ್ರಶ್ನ ಕರ್ತನ ಅಭಿಪ್ರಾಯವನ್ನು ತಿಳಿಯದೆ ಇದ್ದ ನಿನ್ನ ಬುದ್ಧಿಯು ಮುಸಲಾಗ್ರವೋ ಅಥವಾ ಪ್ರಶ್ನ ಕರ್ತನ ಬುದ್ಧಿಯು ಮುಸಲಾಗ್ರವೋ? ಎನ್ನುವದನ್ನು ನೀನೇ ಆಲೋಚಿಸು! “ ಈ ಬಸವನು ಸಕಲ ವಿದ್ಯಾವಿಶಾರದನಾಗಿದ್ದರಿಂದ ತನ್ನ ವಿದ್ಯಾಶಕ್ತಿಯಿಂದ ಪರವಾದಿಗಳನ್ನು ಜಯಿಸಿ ವೀರಶೈವ ಮತವನ್ನುದ್ಧರಿಸಿ ದಿಗಂತ ವ್ಯಾಪ್ತಕೀರ್ತಿಮಂತನಾದನು ” ಎಂದು ಬರೆದಿರುವಿ. ಆದರೆ ಬಸವನು ದಿಗ್ವಿಜಯವನ್ನು ಮಾಡಿ ಯಾವ ಯಾವ ದೇಶಗಳಲ್ಲಿ ಪರವಾದಿಗಳನ್ನು ಜಯಿಸಿದನೋ ಯಾವ ಯಾವ ದೇಶಗಳಲ್ಲಿ ತನ್ನ ಸಿದ್ಧಾಂತ ಧ್ವಜವನ್ನು ಸ್ಥಾಪಿಸಿದನೋ ಹಾಗೂ ಯಾವ ಯಾವ ದಿಕ್ಕುಗಳಲ್ಲಿ ಇವನ ಕೀರ್ತಿಯು ಹಬ್ಬಿರುವದೋ ಎನ್ನುವದನ್ನು ಸ್ಪಷ್ಟವಾಗಿ ತೋರಿಸಿದ್ದರೆ ಬಸವನ ಭಕ್ತರಿಗೆ ನೀನೊಂದು ದೊಡ್ಡ ಉಪಕಾರವನ್ನು ಮಾಡಿದಂತಾಗುತ್ತಿತ್ತು ಎಲೋ ಲೇಖಕನೇ– ಬಸವನು ಚಾಲುಕ್ಯರಾಜ್ಯದ ಮಂತ್ರಿಯಾಗಿ ತನ್ನ ಅಧಿಕಾರದಿಂದ ಜನರನ್ನು ಒಂದು ತರದ ಮಬ್ಬಿಗೆ ಹಾಕಿ ಈ ಕರ್ನಾಟಕ ದೇಶದಲ್ಲ ಮಾತ್ರ ತನ್ನ ಜಾತಿ ಸಾಂಕರ್ಯ ರೂಪವಾದ ಕೀರ್ತಿಯನ್ನು ಉಳಿಸಿಕೊಂಡನೇ ಹೊರತು ಬೇರೊಂದಿಲ್ಲ ; ತಮ್ಮ ತಮ್ಮ ರಾಜ್ಯದಲ್ಲಿ ಮುಸಲ್ಮಾನ ಧರ್ಮವನ್ನು ಹಬ್ಬಿಸಿದ ಔರಂಗಜೇಬ– ಟೀಪುಸುಲ್ತಾನ– ಹೈದರಅಲ್ಲಿ– ಮೊದಲಾದವರಂತೆ ಇವನಾದರೂ ತನ್ನ ಪಂಥವನ್ನು ಹಬ್ಬಿಸಿದನು. ತನ್ನ ಪಂಥಕ್ಕೆ ವಿರೋಧಿಯಾದ ತನ್ನ ಅಧಿಪತಿಯಾದ ಬಿಜ್ಜಳನನ್ನೇ ಕೊಲ್ಲಿಸಿದನು ಆಗಿನ ಕಾಲಕ್ಕೆ ಚಾಲುಕ್ಯ ರಾಜ್ಯದಲ್ಲಿ ತನ್ನ ಕಾರ್ಯಾನುಕೂಲತೆಯ ಬಗ್ಗೆ ಅನೇಕ ದುಷ್ಟ ಜನರನ್ನು ಕೂಡಿ ಹಾಕಿಕೊಂಡು ಅಸಂಖ್ಯ ಕೃತ್ರಿಮಕೃತಿಗಳನ್ನು ನಡೆಯಿಸಿದನು. ಇದೇ ಇವನ

ವಿದ್ಯೆಯು ಹಾಗೂ ಕೀರ್ತಿಯು ಪ್ರಭಾವವು! "ಬಸವನು ತನ್ನ ಅಭಿಪ್ರಾಯವನ್ನು ಸಂಸ್ಕೃತದಲ್ಲಿ ಬರೆದು ಅದಕ್ಕೆ ಕನ್ನಡ ಟೀಕೆಯನ್ನು ಬರೆದಿದ್ದರೆ ಆ ಕನ್ನಡ ಟೀಕೆಯಿಂದ ಕನ್ನಡಿಗರಿಗೂ ಹಾಗೂ ಮೂಲ ಸಂಸ್ಕೃತದಿಂದ ಭರತ ಖಂಡದ ಯಾವತ್ತು ಪ್ರಾಂತದವರಿಗೂ ತನ್ನ ಅಭಿಪ್ರಾಯವನ್ನು ತೋರಿಸಿಕೊಟ್ಟಂತಾಗುತ್ತಿದ್ದಿಲ್ಲವೇ?" ಎಂದು ಪ್ರಶ್ನಕರ್ತನು ಬರೆದದ್ದಕ್ಕೆ ಅಸಾಧಾರಣ ಬುದ್ಧಿಶಾಲಿಯಾದ ನೀನು "ಭರತ ಖಂಡದಲ್ಲಿ ಎಲ್ಲ ಕಡೆಗೆ ಸಂಸ್ಕೃತವನ್ನು ಬಲ್ಲವರೇ ಇರುವದಿಲ್ಲ; ಕೆಲವು ಕಡೆಗೆ ಸಂಸ್ಕೃತವನ್ನು ಬಲ್ಲವರಿದ್ದರೂ ಮತ್ತೊಂದು ಕಡೆಗೆ ಸಂಸ್ಕೃತವನ್ನು ತಿಳಿಯದ ಕೇವಲ ಮಹಾರಾಷ್ಟ್ರರು– ಮುಸಲ್ಮಾನರು– ತೈಲಂಗರು ಕನ್ನಡಿಗರು– ಹೀಗೆ ಅನೇಕ ವಿಧವಾದ ಜನರಿರುವರು. ಇಂಥವರಿಗೆ ಮೂಲ ಸಂಸ್ಕೃತದಿಂದ ಹ್ಯಾಗೆ ಲಾಭವಾಗುವದು? ಇಂಥವರೆಲ್ಲರಿಗೂ ಲಾಭವಾಗಬೇಕಾದರೆ ಅವರವರ ಮಾತೃಭಾಷೆಯಿಂದ ಟೀಕೆಯನ್ನು ಬರೆಯಬೇಕಾಗುವದು. ಕೇವಲ ಸಂಸ್ಕೃತವನ್ನು ಬಲ್ಲವರಿಗಾದರೂ ಮೂಲ ಸಂಸ್ಕೃತದಿಂದ ಲಾಭವಾಗುತ್ತಿತ್ತೆಂದರೆ ಅಂಥವರಿಗೆ ಬಸವನ ಅಭಿಪ್ರಾಯಕ್ಕೆ ವಿಷಯವಾದ ವೀರಶೈವಮತ ತತ್ವವನ್ನು ಬೋಧಿಸುವ ಶಿವಾಗಮಾದ್ಯನೇಕ ಸಂಸ್ಕೃತ ಗ್ರಂಥಗಳು ಇದ್ದೇ ಇರುವವು. ಆದ್ದರಿಂದ ಬಸವನು ಇಂತಹ ಅನಾವಶ್ಯಕವಾದ ಕಾರ್ಯದಲ್ಲಿ ಪ್ರವೃತ್ತನಾಗಲಿಲ್ಲ." ಎಂದು ಬರೆದಿರುವಿ. ಹೀಗೆ ಬರೆಯುವ ನಿನ್ನ ಬುದ್ಧಿಯ ಜಾಣ್ಮೆಗೆ ಬೆಲೆಯಿಲ್ಲ. ಅನಾದಿ ಕಾಲದಿಂದ ವೇದಾಗಮಗಳು ಸರ್ವಮಾನ್ಯಗಳಾಗಿರುತ್ತಿರಲಿಕ್ಕೆ **ಕಾಶ್ಮೀರ– ನೇಪಾಳ– ಮಗಧ ಮಾಲವ– ಬಂಗಾಲ– ದ್ರಾವಿಡ– ಆಂದ್ರ– ಮಹಾರಾಷ್ಟ್ರ– ಕರ್ನಾಟಕ ಮೊದಲಾದ ನಾನಾದೇಶಗಳಲ್ಲಿ ಜನಿಸಿದ ವ್ಯಾಸ– ಗೌತಮ– ಪರಾಶರ– ದೂರ್ವಾಸ– ವಸಿಷ್ಠಾದಿ ಮಹರ್ಷಿಗಳೂ, ಶ್ರೀರೇಣುಕಾದಿ ಪಂಚಾಚಾರ್ಯರೂ, ಶ್ರೀಶಂಕರಾಚಾರ್ಯ–ರಾಮಾನುಜಾಚಾರ್ಯ–ಮಧ್ವಾಚಾರ್ಯರೂ, ವಸುಗುಪ್ತ– ಕ್ಷೇಮೇಂದ್ರ–ರುದ್ರಟ– ಕಲ್ಲಟ–ಶ್ರೀಪತಿ–ಶ್ರೀಕಂಠ–ನೀಲಕಂಠ - ಸ್ವಪ್ರಭಾನಂದ– ನಂದಿಕೇಶ್ವರ– ಉಪಮನ್ಯು– ಪರಮತಕಾಲಾನಲ– ಪರವಾದಿಭಯಂಕರ–ವಜ್ರನಖ– ಚಂಡಭೈರವ– ಕಾಲಿಹಸ್ತದೀಕ್ಷಿತ– ಅಪ್ಪಯ್ಯದೀಕ್ಷಿತ** ಮೊದಲಾದ ಲಕ್ಷಾವಧಿ ದಿಗ್ವಿಜಯ ಪಂಡಿತರು ತಮ್ಮತಮ್ಮ ಮಾತೃ ಭಾಷೆಗಳಲ್ಲಿ ಗ್ರಂಥಗಳನ್ನು ಬರೆಯದೆ ಸಂಸ್ಕೃತ ಭಾಷೆಯಿಂದೇಕೆ ಬರೆದರು? ಅವರಿಗೆ ಬಸವನಷ್ಟು ಬುದ್ಧಿಯಿದ್ದಿಲ್ಲವೇನು? ಅಯ್ಯೋ ಹುಚ್ಚಾ–ಬಸವನಿಗೆ ಸಂಸ್ಕೃತ ವಿದ್ಯೆಯು ಬರುತ್ತಿತ್ತೆಂದು ಸಾಧಿಸುವದಕ್ಕೋಸ್ಕರ ಎಂಥ ಭಯಂಕರವಾದ ಕಾನನದ ಮಾರ್ಗವನ್ನು ಹಿಡಿದಿರುವಿಯಲ್ಲ! ಹೀಗೆ ದುರಭಿಮಾನವನ್ನು ವಹಿಸಿ ಬರೆದರೆ ಬಸವನಿಗೆ ಸಂಸ್ಕೃತ ವಿದ್ಯೆಯು ಬರುತ್ತಿತ್ತೆಂದು ಸಿದ್ಧವಾಗುವದೋ? ಬಸವನಿಗೆ ಸಂಸ್ಕೃತ ವಿದ್ಯೆಯು ಬರುತ್ತಿದ್ದಿಲ್ಲವೆನ್ನುವದೇ ಶತಸಿದ್ಧಾಂತವು! ಅಸ್ತು! "**ವೇದಕ್ಕೆ ಹೊರೆಯ**

ಕಟ್ಟುವೆ-- ಆಗಮಗಳ ಮೂಗು ಕೊಯ್ಯುವೆ" ಎಂಬೀ ಬಸವನ ವಚನದಿಂದ ಅವನು ವೇದಾಗಮಗಳ ವಿರೋಧಿಯಿದ್ದನೆಂದು ಪ್ರಶ್ನಕರ್ತನು ಬರೆದದ್ದಕ್ಕೆ- ನೀನು ಸಿದ್ಧಾಂತ ಶಿಖಾಮಣಿಯ ಪ್ರಮಾಣಗಳನ್ನು ಕೊಟ್ಟು ಬಸವನು ವೇದಾದಿಗಳನ್ನು ಮನ್ನಿಸುತ್ತಿದ್ದನೆಂದು ಬರೆದಿರುವಿ. ಸಿದ್ಧಾಂತ ಶಿಖಾಮಣಿಯಲ್ಲಿ ಶ್ರೀರೇಣುಕಾಚಾರ್ಯರು ಸಮಸ್ತ ವೇದಗಳನ್ನೂ ಆಗಮಗಳನ್ನೂ ಖಂಡಿಸಿರುವದಿಲ್ಲ, ಶಿವೋತ್ಕರ್ಷ ಪ್ರತಿಪಾದಕಗಳಾದ ಶ್ರೀರುದ್ರಾದಿಗಳನ್ನು ಪಠಿಸಬೇಕೆಂದೂ, ವೀರಶೈವನಿಗೆ ಅಪ್ರಯೋಜಕವಾದಜ್ಯೋತಿಷ್ಟೋಮಾದಿಕಾಮ್ಯ ಕರ್ಮಬೋಧಕ ವೇದಾಧ್ಯಯನವನ್ನು ಮಾಡಕೂಡದೆಂದೂ ಅಂದಿರುವರು. ಅರ್ಥಾತ್- ಭಗವತ್ಪಾದರ ಅಭಿಪ್ರಾಯವು "**ನಕ್ವಚಿದ್ವೇದಭಾಗಸ್ಯ ವೇದಮಾತ್ರಾ ಪ್ರಮಾಣತಾಂ। ಕಿಂತುವಚ್ಮಿಃ ಕರ್ಮಕಾಂಡಾತ್ ಜ್ಞಾನಕಾಂಡಸ್ಯ ಮುಖ್ಯತಾಂ॥**" ಎಂಬೀ ಕ್ರಿಯಾ ಸಾರೋಕ್ತಿಯಂತೆ ಸಂಪೂರ್ಣ ವೇದವು ಪ್ರಮಾಣವಾಗಿದ್ದರೂ ಅದರಲ್ಲಿ ವೀರಶೈವನಿಗೆ ಜ್ಞಾನಕಾಂಡವೇ ಮುಖ್ಯವಾಗಿರುತ್ತದೆಂದು ಬೋಧಿಸುವಂತೆ ಇರುತ್ತದೆ. ಹಾಗಿಲ್ಲದಿದ್ದರೆ ಶ್ರೀರೇಣುಕಾಚಾರ್ಯರು ಪೂರ್ವಕಾಂಡ ಪಠಿತವಾದ '**ಪವಿತ್ರಂತೇವಿತತಂ ಬ್ರಹ್ಮಣಸ್ಪತೇ**" ಎಂಬೀ ಋಗ್ವೇದ **ಮಂತ್ರವನ್ನು** ಲಿಂಗಧಾರಣದ ವಿಷಯದಲ್ಲಿ ಪ್ರಮಾಣವನ್ನಾಗಿ ಸ್ವೀಕರಿಸುತ್ತಿದ್ದಿಲ್ಲವೆಂದು ತಿಳಿ! ಹಾಗೂ ಈ ಆಚಾರ್ಯಪಾದರು ಶಿವಾಗಮಗಳ ತತ್ವವನ್ನೇ ಅಗಸ್ತ್ಯರಿಗೆ ಬೋಧಿಸಿರುವರು. ಸಿದ್ಧಾಂತ ಶಿಖಾಮಣಿಯ ಅಭಿಪ್ರಾಯದಂತೆಯೇ ಬಸವನ ಅಭಿಪ್ರಾಯವಿತ್ತೆಂದರೆ ಸಿದ್ಧಾಂತ ಶಿಖಾಮಣಿಯಲ್ಲಿ ಶ್ರೀರೇಣುಕಾಚಾರ್ಯರು ಸ್ಪಷ್ಟವಾಗಿ ಹೇಳಿರುವಂತೆ ಬಸವನಾದರೂ ತನ್ನ ವಚನದಲ್ಲಿ ಶ್ರೀರುದ್ರಾದಿವೇದಾಧ್ಯಯನವನ್ನು ಮಾಡಬೇಕೆಂದೂ, ಕಾಮ್ಯಕರ್ಮಾತ್ಮಕ ವೇದಾಧ್ಯಯನವನ್ನು ಮಾಡಬಾರದೆಂದೂ ಸ್ಪಷ್ಟವಾಗಿ ಹೇಳುತ್ತಿದ್ದನು. ಹೀಗೆ ಹೇಳದೆ ಒಟ್ಟಿಗೆ "**ವೇದಕ್ಕೆ ಹೊರೆಯ ಕಟ್ಟುವೆ ಆಗಮಗಳ ಮೂಗು ಕೊಯ್ಯುವೆ**" ಎಂದು ಬರೆದ ಮೇಲೆ ಇವನು ವೇದಾಗಮಗಳ ವಿರೋಧಿಯೂ ಸಂಸ್ಕೃತ ವಿದ್ಯಾಶತ್ರುವೂ ಆಗಿದ್ದನೆಂದು ಸರ್ವರಿಗೂ ಕನ್ನಡಿಯಂತೆ ತೋರುತ್ತದೆ. ಪ್ರಶ್ನ ಕರ್ತನು ಬಸವನ ಬಗ್ಗೆ ಈ ಸಂದರ್ಭದಲ್ಲಿ **ನರಿಯ ದೃಷ್ಟಾಂತವನ್ನು** ಕೊಟ್ಟಿರುವದು ಯಥಾರ್ಥವೇ ಅದೆ.

(೫೪-೫೫-೮೬-೮೭) ಬಸವನು ತನ್ನ ಚಿಕ್ಕ ವಯಸ್ಸಿನಲ್ಲಿ ಪರಮತದ ಪಂಡಿತರೊಡನೆ ಸಂಸ್ಕೃತ ಮಯವಾದ ಧರ್ಮಶಾಸ್ತ್ರವಾದವನ್ನು ಮಾಡಿಲ್ಲವೆಂದೂ ಸುಮ್ಮನೇ ಗ್ರಂಥಕಾರರು ಬರೆದುಕೊಂಡಿದ್ದಾರೆಂದೂ ಪ್ರಶ್ನ ಕರ್ತನು ಬರೆದದ್ದಕ್ಕೆ- ನೀನು ಪರಮತದ ಪಂಡಿತರೊಡನೆ ಬಸವನು ಶಾಸ್ತ್ರಾರ್ಥವಾದವನ್ನು ಮಾಡಿದನೆಂದು ಬರೆದಿರುವಿ. ಸಂಸ್ಕೃತ ಮಯ ವೇದಾಗಮಗಳ ತತ್ವಜ್ಞಾನ ಶೂನ್ಯನಾದ ಬಸವನಿಗೆ ಧರ್ಮಶಾಸ್ತ್ರದಲ್ಲಿ ವಾಗ್ವಾದಮಾಡುವ ಶಕ್ತಿಯಿತ್ತೆನ್ನುವದಂತೂ ದೂರೇ ಉಳಿಯಿತು. ಇವನಿಗೆ ಸಂಸ್ಕೃತ ವಿದ್ಯೆ

ಯು ಬರುತ್ತಿದ್ದಿಲ್ಲವೆಂದು ಹಿಂದಿನ ವಿಮರ್ಶೆಗಳಿಂದ ಸಿದ್ಧವಾಗಿರುವ ಕಾರಣ ಇವನು ಪರಮತದ ಪಂಡಿತರೊಡನೆ ವಾದಮಾಡಿದನೆಂದು ಹೇಳುವದು **ಗಗನ ಕುಸುಮವೇ ಸರಿ!**

(೫೬–ಉ–ವಿ.) ಬಸವನಿಗೆ ಚಿಕ್ಕವಯಸ್ಸಿನಲ್ಲಿ ಘನತರವಾದ ಪಾಂಡಿತ್ಯವಿದ್ದ ಪಕ್ಷದಲ್ಲಿ ಇವನ ಕೀರ್ತಿಯು ಇಡೀ ಭರತಖಂಡದಲ್ಲಿ ಶ್ರೀ ಶಂಕರಾಚಾರ್ಯ ಮೊದಲಾದವರಿಗಿಂತ ಹೆಚ್ಚಿಗೆ ಹಬ್ಬುತ್ತಿತ್ತು. ಆದರೆ ಇವನ ಹೆಸರು **ಸೊಲ್ಲಾಪುರ** ದಾಟಿದ ಮೇಲೆ ಯಾರಿಗೂ ಗೊತ್ತಿಲ್ಲವೆಂದು ಪ್ರಶ್ನಕರ್ತನು ಬರೆದದ್ದಕ್ಕೆ– ಇವನ ಕೀರ್ತಿಯು ಶಂಕರಾಚಾರ್ಯ ಮೊದಲಾದವರಿಗಿಂತ ಲೋಕದಲ್ಲಿ ಹೆಚ್ಚಿಗೆ ಹಬ್ಬಿರುವದೆಂದು ಬರೆದಿರುವಿ. ಎಲೋ ಲೇಖಕನೆ–ಶಂಕರಾಚಾರ್ಯರಾದಿಗಳ ಸಿದ್ಧಾಂತ ಸ್ಥಾಪನ ಜನ್ಯಕೀರ್ತಿಯು **ಗುಜರಾಥ– ಮಾರವಾಡ– ಬಂಗಾಲ– ನೇಪಾಳ– ಕಾಶ್ಮೀರ–** ಮೊದಲಾದ ದೇಶಗಳಲ್ಲಿ ನಿಬಿಡವಾಗಿ ಹಬ್ಬಿರುತ್ತದೆ. ಆ ದೇಶಗಳಲ್ಲಿ ಈ ನಿಮ್ಮ ಬಸವನ ಕೀರ್ತಿಯೇಕೆ? ಇವನ ಹೆಸರು ಒಬ್ಬರಿಗಾದರೂ ಗೊತ್ತಿದೆಯೋ? ಈ ವಿಷಯದಲ್ಲಿ ಸುಮ್ಮನೆ ದುರಭಿಮಾನವನ್ನು ವಹಿಸುವಿಯಲ್ಲ! ನೀನು ಹಾಗೆ ಬರೆದ ಮಾತ್ರಕ್ಕೆ ಅವನ ಕೀರ್ತಿಯು ಹಬ್ಬಿದಂತಾಯಿತೇ? ಇರಲಿ; ಸೊಲ್ಲಾಪುರ ದಾಟಿದ ಮೇಲೆ ಇವನ ಹೆಸರು ಯಾರಿಗೂ ಗೊತ್ತಿಲ್ಲವೆಂದು ಬರೆದದ್ದಕ್ಕೆ– ಸೊಲ್ಲಾಪುರ ದಾಟಿದ ಮೇಲೆ ಅಂದರೆ **ಪೂನಾ– ಮುಂಬಯಿ– ಪ್ರಯಾಗ– ಕಾಶೀ– ಹರದ್ವಾರ**ಗಳ ಕಡೆಗೆ ಎಂದು ತಿಳಿಯದೆ "ಕಲ್ಯಾಣ ಪಟ್ಟಣವು ಸೊಲ್ಲಾಪುರ ದಾಟಿದ ಮೇಲೆ ಇರುವದಷ್ಟೆ! ಅಲ್ಲಿ ಇವನ ಹೆಸರು ಸರ್ವರಿಗೂ ಗೊತ್ತಿರುವದೆಂದು" ಬರೆದಿರುವಿ. ಇಷ್ಟು ಬುದ್ಧಿಯನ್ನು ಖರ್ಚು ಮಾಡಿ ಕಲ್ಯಾಣದ ದೃಷ್ಟಾಂತವನ್ನು ಕೊಡುವದಕ್ಕಿಂತಲೂ ಸೊಲ್ಲಾಪುರ ದಾಟಿದ ಮೇಲೆ ಇದ್ದ **ಹುಟಗಿ– ವಿಜಾಪುರ– ಬಾಗಲಕೋಟೆ** ಮೊದಲಾದವುಗಳ ದೃಷ್ಟಾಂತವನ್ನು ಕೊಟ್ಟಿದ್ದರೆ ಸಾಕಾಗುತ್ತಿತ್ತು. ಶಹಬಾಶ– ಪಂಡಿತನೇ ಅಹುದು ನಿನ್ನ ಪಾಂಡಿತ್ಯದ ಪ್ರಭಾವವು!

(೫೭–೫೮–ಉ–ವಿ.) ಬಸವನು ತನ್ನ ಪ್ರತಿಪಕ್ಷದವರ ಸಂಗಡ ವಾದಮಾಡಬೇಕಾದರೆ ತನ್ನಲ್ಲಿ ಬ್ರಾಹ್ಮಣ್ಯವುಂಟೆಂದು ಮಾಡಿದನೋ ಅಥವಾ ಬ್ರಾಹ್ಮಣ್ಯವಿಲ್ಲೆಂದು ವಾದ ಮಾಡಿದನೋ? ಬ್ರಾಹ್ಮಣ್ಯವುಂಟೆಂದು ವಾದಮಾಡಿದನೆಂದಪಕ್ಷದಲ್ಲಿ ತನ್ನತಂದೆಯ ಬ್ರಾಹ್ಮಣ್ಯಕ್ಕೂ ಹಾಗೂ ತನ್ನ ಬ್ರಾಹ್ಮಣ್ಯಕ್ಕೂ ಯಾವ ವ್ಯತ್ಯಾಸವನ್ನು ತೋರಿಸಿದನೆಂದು ಪ್ರಶ್ನ ಕರ್ತನು ಕೇಳಿದ್ದಕ್ಕೆ– ನೀನು ಬಸವನ ತಂದೆಯಲ್ಲಿ **ಪ್ರಾಕೃತ ಬ್ರಾಹ್ಮಣ್ಯ**ವಿತ್ತೆಂದೂ, ಬಸವನಲ್ಲಿ **ಅಪ್ರಾಕೃತ ಬ್ರಾಹ್ಮಣ್ಯ**ವಿತ್ತೆಂದೂ ಬರೆದಿರುವಿ. ಪ್ರಾಕೃತ ಧರ್ಮವು ಬ್ರಹ್ಮನಿಂದಲೂ ಅಪ್ರಾಕೃತಧರ್ಮವು ಶಿವನಿಂದಲೂ ನಿರ್ಮಿಸಲ್ಪಟ್ಟಿರುವವು. ಪ್ರಾಕೃತ ಧರ್ಮಕ್ಕೂ ಹಾಗೂ ಅಪ್ರಾಕೃತಧರ್ಮಕ್ಕೂ ಏನೂ ಸಂಬಂಧವಿರುವದಿಲ್ಲ.

ನಿನ್ನ ಅಭಿಪ್ರಾಯದಂತೆ ಪ್ರಾಕೃತ ಧರ್ಮಕ್ಕೊಳಪಟ್ಟ ಮಾದರಸ ಮಾದಾಂಬಿಕೆಯರ ಉದರದಿಂದ ಬಸವನು ಹುಟ್ಟಿದಮೇಲೆ ಅವನು ಅಪ್ರಾಕೃತನು ಹೇಗಾಗುವನು? ಜಲದೇವನು ವೀರಶೈವಸಿದ್ಧನೆಂದು ನೀನು ಒಪ್ಪಿರುವಿಯಷ್ಟೆ! ಅಂದಮೇಲೆ ಇವನತಂಗಿಯಾದ ಮಾದಾಂಬಿಕೆ ಯಾದರೂ ವೀರಶೈವಳಾದಳಷ್ಟೆ! ವೀರಶೈವಳಾದ ಮಾದಾಂಬಿಕೆಯ ಪತಿಯು ವೀರಶೈವನಾಗದೆ ಅನ್ಯಮತದವನಾಗುವನೇನು? ಅನ್ಯಮತದವನಿಗೆ ಆಕೆಯನ್ನು ಲಗ್ನ ಮಾಡಿಕೊಟ್ಟದ್ದನೆಂದರೆ "ಸ್ವಮಾರ್ಗಾಚಾರವರ್ತಿಭ್ಯಃ ಸ್ವಜಾತಿಭ್ಯಃ ಸದಾವ್ರತೀ। ದದ್ಯಾತ್ತೇಭ್ಯಃ ಸಮಾದದ್ಯಾತ್ಕನ್ಯಾಂ ಕುಲಸಮುದ್ಭವಾಂ॥" ಈ ಪ್ರಕಾರವಾಗಿ ತಮ್ಮ ತಮ್ಮ ಕುಲದಲ್ಲಿಯೇ ಕನ್ಯೆಯನ್ನು ಕೊಡಬೇಕೆಂತಲೂ ತರಬೇಕೆಂತಲೂ ಬೋಧಿಸುವ ಸಿದ್ಧಾಂತ ಶಿಖಾಮಣಿಯ ವಾಕ್ಯಕ್ಕೆ ಭಂಗತಂದಂತಾಗಲಿಲ್ಲವೇ? ಇನ್ನು ಗಂಡಹೆಂಡರಿಬ್ಬರೂ ವೀರಶೈವರಿದ್ದರೆಂದು ಹೇಳಿದರೆ ಮಾದರಸನಿಗೆ ಪ್ರಾಕೃತ ಬ್ರಾಹ್ಮಣನೆಂದು ಬರೆದಿರುವದು ಕೇವಲ ಮೂಢತನವಲ್ಲವೇ ಹೇಗೆ? ಇಷ್ಟು ಪೂರ್ವಾಪರ ವಿಚಾರವಿಲ್ಲದೆ ಉತ್ತರವನ್ನು ಬರೆಯುವ ನಿನ್ನ ಬುದ್ಧಿಯ ಪ್ರಭಾವವನ್ನು ಎಷ್ಟು ಹೊಗಳಿದರೂ ಅಲ್ಪವೇ ಸರಿ!

(೫೯--ಉ--ವಿ.) ವೀರಶೈವರಿಗೆ ಶಿಖ ಸೂತ್ರಾದಿಗಳಿರಬೇಕೆಂದು "ಬ್ರಾಹ್ಮಣಾ ವೀರಶೈವಸ್ಥಾಃ ಶಿಖಾಯಜ್ಞೋಪವೀತಿನಃ॥" ಇತ್ಯಾದಿ ಪಾರಮೇಶ್ವರಾಗಮಾದಿ ವಾಕ್ಯಗಳಿಂದ ಸಿದ್ಧವಾಗುತ್ತಿರಲು ಬಸವನು ಇವುಗಳನ್ನು ದೂರೀಕರಿಸಿದ್ದು ಶಾಸ್ತ್ರವಿರೋಧವಲ್ಲವೇ ಹೇಗೆ? ಎಂದು ಪ್ರಶ್ನಕರ್ತನು ಕೇಳಿದ್ದಕ್ಕೆ— ನೀನು ಪಾರಮೇಶ್ವರಾಗಮಾದಿಗಳಲ್ಲಿ ವೀರಶೈವರಿಗೆ ಶಿಖಾಸೂತ್ರಾದಿಗಳು ಹೇಳಿಲ್ಲವೆಂದೂ ಶುದ್ಧಶೈವರಿಗೆ ಹೇಳಿರುವವೆಂದೂ ಬರೆದಿರುವಿ. ಇದರ ಮೇಲಿಂದ ಪಾರಮೇಶ್ವರಾಗಮದ ೧೭ ನೆಯ ಪಟಲದಲ್ಲಿರತಕ್ಕ ಶ್ಲೋಕಗಳ ಅರ್ಥವೇ ಗೊತ್ತಾಗಿರುವದಿಲ್ಲವೆಂದು ಸ್ಪಷ್ಟವಾಗಿ ತೋರುತ್ತದೆ, ನೋಡು! ಪಾರ್ವತಿದೇವಿಯು— "ಪಾಹಿಶಂಕರಪಾಪಾರೇ ಭಕ್ತಾರ್ತಿ ಭಯನಾಶನ। ಪದಲೋಕೋಪಕಾರಾಯ ವೀರಶೈವೇ ವಿಶೇಷಕಂ॥ ಈ ಪ್ರಕಾರವಾಗಿ ವೀರಶೈವ ಮತದಲ್ಲಿ ವಿಶೇಷವಾಗಿದ್ದ ವಿಷಯವನ್ನು ಹೇಳೆಂದು ಪ್ರಶ್ನಮಾಡಿದ್ದಕ್ಕೆ ಪರಮಾತ್ಮನು— "ಶುದ್ಧಶೈವಂ ಮಿಶ್ರಶೈವಂ ಮಾರ್ಗಶೈವಂ ತೃತೀಯಕಂ। ಚತುರ್ಥಂ ವೀರಶೈವಂಚ ಪಂಚಮೋऽವಾಂತರಸ್ತಥಾ॥ ತತ್ರತತ್ರ ವಿಭೇದೇನ ಜಾತಿಭೇದೇನಕೇನಚಿತ್। ವರ್ತಂತೇ ಲಿಂಗಿನೋದೇವಿ ಜಾತಿಕರ್ಮ ಸಮಾಶ್ರಿತಃ॥ ಬ್ರಾಹ್ಮಣಾವೀರಶೈವಸ್ಥಾಃ ಶಿಖಾಯಜ್ಞೋಪವೀತಿನಃ। ಲಿಂಗರುದ್ರಾಕ್ಷ ಭಸ್ಮಾಂಕಾ ಬ್ರಹ್ಮಕರ್ಮಸಮಾಶ್ರಿತಾಃ॥ ಶಿವಾಚಾರರತಾನಿತ್ಯಂ ಲಿಂಗಪೂಜಾಪರಾಯಣಾಃ। ಶಿವಾರಾಧ್ಯಾಃ ಸದಾದೇವಿ ಮಮಾತಿಪ್ರಿಯಕಾರಿಣಃ॥ ಶುದ್ಧಶೈವಾಃಸಮಾಖ್ಯಾತಾ ಗೃಹಸ್ಥಾ ಗೃಹಿಣೀಯುತಾಃ॥ ಮಿಶ್ರಶೈವಾ

ಮಹಾದೇವಿ ಕ್ಷತ್ರಿಯಾ ವೈಶ್ಯಶೂದ್ರಜಾಃ । ಸುಶೀಲಾಚಾರ ಸಂಪನ್ನಾಃ ಶೀಲವಂತಶ್ಚಲಿಂಗಿನಃ ॥ ಇವೇ ಮೊದಲಾದ ೨೫ ಶ್ಲೋಕಗಳಿಂದ ವೀರಶೈವರಲ್ಲಿರತಕ್ಕ ಕುಲಭೇದಗಳನ್ನು, **ಶುದ್ಧಶೈವ– ಮಿಶ್ರಶೈವ-- ಮಾರ್ಗಶೈವ– ವೀರಶೈವ– ಅವಾಂತರಶೈವ–** ಎಂಬ ಪಂಚಭೇದಗಳಿಂದಲೂ ಹಾಗೂ **ಅನುಶೈವ-- ಅಂತರಶೈವ– ಮಹಾಶೈವ–** ಎಂಬ ಉಪಭೇದಗಳಿಂದಲೂ ಬೋಧಿಸಿರುತ್ತಾನೆ ಹೀಗಿದ್ದು ಈ ಶ್ಲೋಕಗಳ ಅಭಿಪ್ರಾಯವೇ ಮಹಾ ಪಂಡಿತನಾದ ನಿನಗೆ ತಿಳಿದಿಲ್ಲವೆಂಗಮೇಲೆ ಯಾರೇನು ಮಾಡುವರು? **ಶುದ್ಧಶೈವ-- ಮಿಶ್ರಶೈವಾದಿ**ಭೇದಗಳು ಈ ಆಗಮಾಭಿಪ್ರಾಯಕ್ಕನುಸರಿಸಿ **ವೀರಶೈವಾಂತರ್ಗತಗಳೇ** ಇರುತ್ತವೆ. ಆದ್ದರಿಂದಲೇ-- “ಬ್ರಾಹ್ಮಣಾ ವೀರಶೈವಸ್ಥಾಃ ಶಿಖಾಯಜ್ಞೋಪವೀತಿನಃ” ಎಂಬ ವಾಕ್ಯದಿಂದ **ಶುದ್ಧಶೈವ**ರೆಂಬ ನಾಮವುಳ್ಳ **ವೀರಶೈವ ಬ್ರಾಹ್ಮಣರಿಗೆ** ಶಿಖಾಯಜ್ಞೋಪವೀತಗಳು ಇರತಕ್ಕದ್ದೆಂದು ಪರಮಾತ್ಮನು ಬೋಧಿಸಿದ್ದಾನೆ. ಈತತ್ವವನ್ನು ತಿಳಿಯದೆ “**ಶಿವಾಚಾರರತಾನಿತ್ಯಂ**” ಇತ್ಯಾದಿ ಶ್ಲೋಕಗಳನ್ನು ಬರೆದು ಇವು ಶುದ್ಧ ಶೈವಪರವೆಂದು ಬರೆದಿರುವದು ನಿನ್ನ ಮೂಢತನವೇ ಸರಿ!

“ಪೀಠಾಚಾರ್ಯೈಃ ಸಂಧೃತೇಷ್ಟಲಿಂಗಬ್ರಹ್ಮಸಮಾಯುತಃ । ಶಿಖಾಸೂತ್ರ ಜಟಾಭಸ್ಮ ತಿವಲಾಂಛನ ಲಾಂಛಿತಃ ॥ ಎಂದು ಪಾಶುಪತ ತಂತ್ರದಲ್ಲಿಯೂ ಹಾಗೂ ವೀರಶೈವ ಸದಾಚಾರ ಸಂಗ್ರಹದ ೫೪ ನೆಯ ಪುಟದಲ್ಲಿಯೂ ವೀರಶೈವ ಪ್ರಕರಣದಲ್ಲಿ ಪಠಿತವಾದ ಈ ಶ್ಲೋಕವು ಶುದ್ಧ ಶೈವಪರವಾಗಿರುವದೆಂದು ಬರೆದಿರುವದನ್ನು ನೋಡಿದರೆ ಚಿಕ್ಕ ಬಾಲಕರೂಕೂಡ ನಗದೆಇರಲಾರರು| ಈ ಶ್ಲೋಕಗಳು ವೀರಶೈವ ಪರವಾಗಿರುವವೋ ಅಥವಾ ಇಲ್ಲವೋ ಎಂಬ ವಿಷಯದಲ್ಲಿ ಗ್ರಂಥಗಳನ್ನು ಸ್ವಲ್ಪ ಕಣ್ದೆರದು ನೋಡು! ಅತ್ಯಂತವಾಗಿ ಅಡವಿಯನ್ನು ಪೇಳಬೇಡ! ನೀನು ವೀರಶೈವನಿಗೆ ಶಿಖಾಸೂತ್ರಾದಿಗಳಿರಬಾರದೆಂದು ಕೆಲವು ಶ್ಲೋಕಗಳನ್ನು ಉದಾಹರಿಸಿರುವಿಯಷ್ಟೆ! ಆ ಶ್ಲೋಕಗಳು ವಾತುಲಾಗಮ– ಕಾಮಿಕಾಗಮ– ವೀರಾಗಮಗಳಲ್ಲಿರುತ್ತವೆಂದು ಬರೆದಿರುವಿ. ಆ ಶ್ಲೋಕಗಳು ಯಾವ ಯಾವ ಆಗಮದ ಎಷ್ಟೆಷ್ಟನೆಯ ಪಟಲದಲ್ಲಿರುತ್ತವೆನ್ನುವದನ್ನು ತೋರಿಸಿರುವದಿಲ್ಲ. ಈ ಮೂರೂ ಆಗಮಗಳು ಪ್ರಿಂಟಾಗಿವೆ. ಅವುಗಳಲ್ಲಿ ಪಾತಾಳಗಡೆಯನ್ನು ಹಾಕಿ ಹುಡಿಕಿದರೂ ನೀನು ಬರೆದ ಶ್ಲೋಕಗಳು ಶಿಗಲೊಲ್ಲವು! ಇದು ನಿನ್ನ ಕೃತ್ರಿಮತನವೋ ಅಥವಾ ಬಸವನಕಾಲದಿಂದೀಚಿನ ವೀರಶೈವ ಬ್ರಾಹ್ಮಣ (ಆರಾಧ್ಯ ಬ್ರಾಹ್ಮಣ) ದ್ವೇಷಿಗಳಾದ ಧೂರ್ತರ ಕೃತ್ರಿಮತನವೋ ತಿಳಿಯದು. ಅಸ್ತು! “ಸಶಿಖಾವಪನಂಕೃತ್ವಾ ಬಹಿಃಸೂತ್ರಂತ್ಯಜೇದ್ಬುಧಃ” ಇತ್ಯಾದಿ ಬ್ರಹ್ಮೋಪ ನಿಷದ್ವಾಕ್ಯಗಳನ್ನು ಉದಾಹರಿಸಿ ಶಿಖಾಸೂತ್ರ ಧಾರಣವನ್ನು ನಿಷೇಧಿಸಿರುವಿ. ಹುಚ್ಚಾ– ನೀನು ಕೊಟ್ಟಿರುವ ಬ್ರಹ್ಮೋಪನಿಷದ್ವಾಕ್ಯಗಳು ಮೊದಲು ಶಿಖಾಸೂತ್ರಗಳಿದ್ದು ಅನಂತರ ಅವುಗಳನ್ನು ತೆಗೆದು ಹಾಕಿ ಸನ್ಯಾಸಾಶ್ರಮವನ್ನು

ಸ್ವೀಕಾರ ಮಾಡತಕ್ಕವನ ವಿಷಯದಲ್ಲಿರುತ್ತವೆಂದು ಚಿಕ್ಕ ಬಾಲಕರಿಗೂ ಕೂಡ ತಿಳಿಯು ವಂತಿರುತ್ತದೆ. ಹೀಗಿದ್ದಾಗ್ಯೂ ಈ ಉಪನಿಷದ್ವಾಕ್ಯಗಳ ಯೋಜನವನ್ನು ವೀರಶೈವರ ಶಿಖಾಸೂತ್ರರಾಹಿತ್ಯ ವಿಷಯದಲ್ಲಿ ಮಾಡಿರುವದು ಮಂದ ಬುದ್ಧಿಯ ಪ್ರಭಾವವೇ ಸರಿ! "ವಿಶಿಖಾಸಃ ಕಪರ್ದಿನಃ" ಎಂಬ ಶ್ರೀರುದ್ರಮಂತ್ರವನ್ನುದಾಹರಿಸಿ ವೀರಶೈವರಿಗೆ ಶಿಖೆಯಿಲ್ಲವೆಂದು ಬರೆದಿರುವಿ. "ವಿಶಿಖಾಸಃ= ವಿವಿಧಶಿಖಾಃ" ಎಂದು ಅರ್ಥ ವನ್ನು ಮಾಡಿರುವ ಭಟ್ಟಭಾಸ್ಕರ ಭಾಷ್ಯವನ್ನು ನೋಡು! ಶಿಖಾಸೂತ್ರಾದಿರಾಹಿತ್ಯದ ಬಗ್ಗೆ ನಿನ್ನ ಅಭಿಪ್ರಾಯ ಪಡುವದು ಶೂದ್ರಮಾರ್ಗ ವಾಗಿರುತ್ತದೆ. ನೀನು ಆ ಮಾರ್ಗವನ್ನು ಅನುಸರಿಸಿದರೂ ಅನುಸರಿಸ ಬಹುದು! ನಮಗೇನು ಚಿಂತೆಯಿಲ್ಲ! ವೀರ ಶೈವನಿಗೆ ಶಿಖಾಸೂತ್ರಾದಿಗಳಿರಬೇಕೆಂಬ ಬಗ್ಗೆ ಪ್ರಮಾಣಗಳನ್ನು ನೋಡು!

ಶ್ರೀಮದ್ದಂಡ ಶಿಖೋಪವೀತ ವಿಲಸತ್ಕಂಥಾಜಿನಾಲಂಕೃತಃ |
ಕಾಷಾಯಾಂಬರ ಕುಂಡಿಕಾಪ್ರಣವಪಾತ್ರಶ್ಚ ಶ್ರಮೌಂಜೀಧರಃ ||
ವೇದಾಂತೋಭಯವಾಕ್ಯಬೋಧಿತ ಲಸಚ್ಛ್ರೀಭಸ್ಮಘುಂಟೀಯುತಃ |
ಏಕೋರಾಮಯತೀಂದ್ರ ಶೇಖರ ಶಿವಾಚಾರ್ಯಃ ಸದಾಪಾತುನಃ ||೧||

ಈ ಪ್ರಕಾರವಾಗಿ ಜಗತ್ಪ್ರಸಿದ್ಧರಾದ ಶ್ರೀಪತಿ ಪಂಡಿತರು ತಮ್ಮ ಶ್ರೀಕರಭಾಷ್ಯ ದ ಆದಿಯಲ್ಲಿ ನಿನ್ನ ಗುರುವಿನ ಗುರುಗಳಾದ ಶ್ರೀಜಗದ್ಗುರು ಏಕೋರಾಮಾರಾ ಧ್ಯರ ಸ್ತುತಿಯನ್ನು ಮಾಡಿರುತ್ತಾರೆ. ಇದರಲ್ಲಿ ಆ ಪೂಜ್ಯಪಾದರಿಗೆ ಶಿಖಾಸೂತ್ರಗಳಿ ದ್ದವೆಂದು ಸ್ಪಷ್ಟವಾಗಿ ಉಲ್ಲೇಖಿಸಿದ್ದಾರೆ. ಹಾಗೂ ಈ ಶ್ರೀಕರಭಾಷ್ಯಕಾರರು "ಅಥಾ ತೋಬ್ರಹ್ಮಜಿಜ್ಞಾಸಾ" ಎಂಬ ಸೂತ್ರದ ಭಾಷ್ಯದಲ್ಲಿ "ಹರಿಕೇಶಾಯೋಪವೀ ತಿನೇ ರುದ್ರಶ್ಶಿಖೇತ್ಯಾದೌ ಭಸ್ಮರುದ್ರಾಕ್ಷಾದಿ ವಚ್ಛಿವಸ್ಯೈವ ಶಿಖಾಸೂ ತ್ರಶ್ರವಣಾಚ್ಛಿವಲಾಂಛನಮಿತಿಸಿದ್ಧಂ" ಈ ಪ್ರಕಾರವಾಗಿ ಸ್ಪಷ್ಟರೀತಿಯಿಂದ ಶಿಖಾಸೂತ್ರ ಧಾರಣವನ್ನು ಸಿದ್ಧಗೊಳಿಸಿದ್ದಾರೆ. ಇದಲ್ಲದೆ "ಮುಖೇಮಂತ್ರೋ ಹೃದಿ ಧ್ಯಾನಂ ಮಸ್ತಕೇಲಿಂಗಧಾರಣಂ| ಶಿಖಾರುದ್ರಾಕ್ಷ ಭಸ್ಮಾನಿ ಇತಿ ಬ್ರಾಹ್ಮಣ ಲಕ್ಷಣಂ||" ಎಂದು ವೀರಶೈವಬ್ರಾಹ್ಮಣ ಲಕ್ಷಣಗಳಲ್ಲಿ ಶಿಖಾಧಾರಣವನ್ನು ಪ್ರತಿಪಾದಿಸುವ ಗೌತಮ ಸ್ಮೃತಿಯನ್ನು ನೋಡು! ಹಾಗೂ "ಶಿಖಾಯಾ ಮೇಕಮೇಕಾಸ್ಯಂ ರುದ್ರಾಕ್ಷಂಧಾರಯೇ ದ್ಬುಧಃ" ಎಂಬ ಸಿದ್ಧಾಂತ ಶಿಖಾಮಣಿಯ ವಾಕ್ಯವನ್ನು ನೋಡು! "ಶಿಖಾಹೀನಸ್ಯ ಭಕ್ತ ಸ್ಯ ನಚವಕ್ತ್ರಾವಲೋಕನಂ" ಎಂದು ಪಾರಮೇಶ್ವರಾಗಮವು ಶಿಖೆಯಿಲ್ಲದ ಭಕ್ತನ ಮುಖ ವನ್ನು ನೋಡ ಬಾರದೆಂದು ಬೋಧಿಸುತ್ತದೆ. ಹಾಗೂ ಷಡಂಗನ್ಯಾಸದಲ್ಲಿ "ವಷಟ್" ಎಂಬ ಪಲ್ಲವ ಯೋಜನೆಗೆ ಶಿಖೆಯೇ ಮೂಲವಾಗಿರುತ್ತದೆ. ಹಾಗೂ ವೀರಶೈವ ದೀಕ್ಷಾ ವಿಧಿಯಲ್ಲಿ "ಪ್ರಾಪ್ತ್ಯರ್ಥಿಕೋಕ್ತೇ ಶುಭೇ ಮುಹೂರ್ತೇ ಕೃತವಾಪಸ್ಸ್ನಾಪಿತಂ ಬದ್ಧ

ಶಿಖಂ ಕುಮಾರಂಸ್ವ ಸಮೀಪಮಾನೀಯ ತನ್ಮುಖಂಸಮ್ಯಗೀಕ್ಷೇತ" ಈ ಪ್ರಕಾರವಾಗಿ ದೀಕ್ಷಾಕಾಲದಲ್ಲಿ ಶಿಖಾಬದ್ಧನಾಗಿರಬೇಕೆಂದು ಶಾಸನ ವಿರುತ್ತದೆ. ಈ ಯಾವತ್ತು ಪ್ರಮಾಣಗಳನ್ನು ಪ್ರಿಂಟಾದ ಗ್ರಂಥಗಳಲ್ಲಿ ನೋಡು! ಈ ಪ್ರಕಾರವಾಗಿ ವೀರಶೈವ ಬ್ರಾಹ್ಮಣನಿಗೆ **ಶಿಖಾಸೂತ್ರಧಾರಣವು** ಅನೇಕ ಗ್ರಂಥಗಳಲ್ಲಿ ಉಕ್ತವಾಗಿದ್ದರೂ ಇದನ್ನು ಬಸವನು ತಿರಸ್ಕರಿಸಿದ್ದು **ಮಹಾಧರ್ಮದ್ರೋಹ** ವೆಂದು ಸಿದ್ಧವಾಗುವದಿಲ್ಲವೇ?

(೬೦-ಉ-ವಿ.) ಬಸವನು ಬಿಜ್ಜಳನಲ್ಲಿ ನೌಕರನಾಗಿದ್ದನೋ ಇಲ್ಲವೋ? ಎಂದು ಪ್ರಶ್ನೆ ಮಾಡಿದ್ದಕ್ಕೆ- ಬಸವನು ಬಿಜ್ಜಳನ ನೌಕರನಾಗಿದ್ದಿಲ್ಲವೆಂದೂ, ಸಂಗಮೇಶ್ವರನ ಆಜ್ಞಾನುಸಾರವಾಗಿ ಶಿವಭಕ್ತಿಯನ್ನು ಪ್ರಚಾರಗೊಳಿಸುವದಕ್ಕಾಗಿ ಬಿಜ್ಜಳನ ಹತ್ತಿರ ಬಂದು ಇದ್ದನೆಂದೂ ಬರೆದಿರುವಿ. ಸಂಗಮೇಶ್ವರನು ಇವನಿಗೆ ನೀನು ಇಡೀ ಭರತಖಂಡದಲ್ಲಿ ಶಿವಭಕ್ತಿಯನ್ನು ಪ್ರಚಾರ ಮಾಡೆಂದು ಹೇಳಿದ್ದನೋ ಅಥವಾ ಕೇವಲ ಬಿಜ್ಜಳನ ರಾಜ್ಯದಲ್ಲಿದ್ದುಕೊಂಡು ಅವನ ರಾಜ್ಯದ ಮಟ್ಟಿಗೆ ಶಿವಭಕ್ತಿಯನ್ನು ಪ್ರಚಾರ ಮಾಡೆಂದು ಹೇಳಿದ್ದನೋ! ಶಿವಭಕ್ತಿಯನ್ನು ಪ್ರಚಾರ ಮಾಡಬೇಕಾದರೆ ಇವನಿಗೆ ಮಂತ್ರಿಯ ಕೆಲಸವೇಕೆ ಬೇಕಾಗಿತ್ತು? **ಶ್ರೀರೇಣುಕಾದಿಪಂಚಾಚಾರ್ಯರೂ** ಹಾಗೂ **ಶ್ರೀಶಂಕರಾಚಾರ್ಯ** ಮೊದಲಾದವರೂ ಒಬ್ಬರಲ್ಲಿ ನೌಕರರಾಗಿದ್ದು ಶಿವಭಕ್ತಿಯನ್ನು ನೆಲೆಗೊಳಿಸಿದರೇ ಹೇಗೆ? ದೊಡ್ಡ ದೊಡ್ಡ ಕಾರ್ಯವನ್ನು ಮಾಡುವವರು ಸ್ವತಂತ್ರರಾಗಿರುತ್ತಾರೆಯೇ ಹೊರತು ಪರಾಧೀನರಾಗಿರುವದಿಲ್ಲ; ಲೋಕದಲ್ಲಿ ರಾಜರಾಗಲಿ ಅಥವಾ ಶ್ರೀಮಂತರಾಗಲಿ ತಾವು ಸಂಬಳಕೊಟ್ಟು ಇಟ್ಟ ನೌಕರರು ತಪ್ಪುಗಳನ್ನು ಮಾಡಿದರೆ ಅವರನ್ನು ತೆಗೆದು ಹಾಕುವಂತೆ ಬಸವನು ಅನೇಕ ತಪ್ಪುಗಳನ್ನು ಮಾಡಿದಕಾರಣ ನೋಡಿ ನೋಡಿ ಒಂದಾನೊಂದು ದಿವಸ ಬಿಜ್ಜಳನು ತನ್ನ ನೌಕರನಾದ ಈ ಬಸವನನ್ನು ಹೊರಗೆ ಹಾಕಿದನೆಂದು ಶಿಂಗಿರಾಜ ಪುರಾಣವು ಸಾರುತ್ತದೆ. ಸ್ವಲ್ಪ ಕಣ್ತೆರದು ನೋಡು! ಅಂದಮೇಲೆ ಇವನು ನೌಕರನಾಗಲಿಲ್ಲವೇ ಹೇಗೆ? ನೀನೇ ಆಲೋಚಿಸು; ನೀನು ಈ ಉತ್ತರದಲ್ಲಿ ಶ್ರೀರೇಣುಕಾಚಾರ್ಯರ ಸಾದೃಶ್ಯವನ್ನು ತೆಗೆದುಕೊಂಡಿರುವದು ಕೇವಲ ತಿಳಿಗೇಡಿತನವು! ಮೂಢನೇ- ಶ್ರೀರೇಣುಕಾಚಾರ್ಯರು ವಿಭೀಷಣನ ಪೌರೋಹಿತ್ಯವನ್ನು ಸ್ವೀಕರಿಸಿದ್ದರೋ? ಆ ಪವಿತ್ರ ಚರಿತ್ರವನ್ನಾದರೂ ನೋಡಿರುವಿಯಾ? ಯುಗಯುಗಾಂತರಗಳಿಂದ ಭಗ್ನ ಮನೋರಥನಾದ ವಿಭೀಷಣನನ್ನು ಉದ್ಧರಿಸುವದಕ್ಕೋಸ್ಕರ ಈ ಜಗದ್ಗುರುಗಳು ಸ್ವತಃ ಲಂಕೆಗೆ ದಯಮಾಡಿಸಿ ಅವನ ದೀನಪ್ರಾರ್ಥನೆಯನ್ನು ಕೇಳಿಕೊಂಡು ಅಸಾಧಾರಣ ಭಕ್ತಿ ಧುರೀಣನಾದ ಅವನನ್ನು ಉದ್ಧರಿಸುವದಕ್ಕೋಸ್ಕರ ಒಂದು ಕ್ಷಣದಲ್ಲಿಯೇ **ಮೂರು ಕೋಟಿ ಗುರುರೂಪವನ್ನು ಧಾರಣಮಾಡಿ** ಮೂರು ಕೋಟಿ ಶಿವಲಿಂಗಗಳನ್ನು ಸ್ಥಾಪಿಸಿದರೆಂದು **ಲೋಕಾದ್ಭುತವಾದ ಚರಿತ್ರ**ವಿರುತ್ತದೆ. ಶಿದ್ಧಾಂತ ಶಿಖಾಮಣಿಯ ೨೧ ನೆಯ ಪರಿಚ್ಛೇದದಲ್ಲಿ ಈ ಚರಿತ್ರವನ್ನು ನೋಡು! ಇಂಥ

ಲೋಕಾದ್ಭುತ ಕಾರ್ಯವನ್ನು ಮಾಡಿ **ವಿರಾಢ್ರೂಪಿಗಳೆಂದೆನಿಸಿಕೊಂಡ** ಈ ಆಚಾರ್ಯ ಪುಂಗವರಿಗೆ ಸಾಮಾನ್ಯವಾದ ಪುರೋಹಿತ ಪದವನ್ನು ಉಪಯೋಗಿಸಿರುವ ನಿನ್ನ ಪಾಪ ಮಯ ಬುದ್ಧಿಗೆ ಬೆಲೆಯಿಲ್ಲ! ಈ ದೃಷ್ಟಾಂತದಿಂದ ಬಸವನು ನೌಕರನಾಗಿದ್ದಿಲ್ಲವೆಂದು ಸಿದ್ಧವಾಗುವದೋ? ಅವನು ನಿಜವಾಗಿ **ಬಿಜ್ಜಳನ ನೌಕರನೇ ನೌಕರನು!**

(೬೧–ಉ–ವಿ.) ಬಿಜ್ಜಳನಲ್ಲಿ ನೌಕರಿಯಾಗಿದ್ದ ಬಸವನು ದೇವನು ಹೇಗೆ ಆಗು ವನು? ಎಂದು ಪ್ರಶ್ನೆ ಮಾಡಿದ್ದಕ್ಕೆ– ಶ್ರೀರೇಣುಕಾಚಾರ್ಯರ ಹಾಗು ಕೃಷ್ಣ ಷಣ್ಮುಖರ ದೃಷ್ಟಾಂತಗಳನ್ನು ತೆಗೆದುಕೊಂಡಿರುವಿ. ಇದು ಶುದ್ಧ ಅಸಂಗತವು! ಯಾಕಂದರೆ– ಪರಮಾತ್ಮನ ಆಜ್ಞೆಯ ಮೇರೆಗೆ ವೀರಶೈವ ಮತವನ್ನು ಪ್ರತಿಷ್ಠೆಗೊಳಿಸಲು ಭೂಲೋಕ ದಲ್ಲಿ ಶಿವಲಿಂಗದಿಂದವತರಿಸಿದ ಜ್ಯೋತಿರ್ಮಯರಾದ ಶ್ರೀರೇಣುಕಾಚಾರ್ಯರು ವಿಭೀಷ ಣನೆಂಬ ಮನೆಯಲ್ಲಿ ಚಾಕರರಾಗಿದ್ದರೆಂದು ಪ್ರಾಚೀನ ರೇಣುಕ ವಿಜಯಾದಿ ಗ್ರಂಥಗಳಲ್ಲಿ ಉಲ್ಲೇಖಿಸಲ್ಪಟ್ಟಿರುವದಿಲ್ಲ. ಹಾಗೂ ಆ ಪೂಜ್ಯಪಾದರು ಚಾಕರಿಯನ್ನು ಮಾಡುವದ ಕ್ಕಾಗಿ ಭೂಲೋಕದಲ್ಲಿ ಅವತರಿಸಿಲ್ಲ; ಮತಸ್ಥಾಪನೆಗಾಗಿ ಅವತರಿಸಿದ್ದಾರೆ. ಆದರೆ ಬಸ ವನ ಕಾಲದಿಂದೀಚಿನ ಅಮುಂಗಲ ಕವಿಗಳು ಹಿಂದೆಯೂ ಮುಂದೆಯೂ ವಿಚಾರ ಮಾಡದೆ ಈ ಮಹರ್ನಿಯರ ಚರಿತ್ರದಲ್ಲಿ ಕೆಲವು ವಿಷಯಗಳನ್ನು ಕಾಲ್ಪನಿಕವಾಗಿ ಸೇರಿಸಿರುವ ಕಾರಣ ಅವು ಪ್ರಮಾಣಭೂತಗಳಾಗುವದಿಲ್ಲ. ಈ ವಿಷಯದಲ್ಲಿ ಳಳಸೆಯ ವಿಮರ್ಶವನ್ನು ನೋಡು! ಕೃಷ್ಣನು ಅರ್ಜುನನಿಗೆ ಸಾರಥಿಯಾದದ್ದೂ ಹಾಗೂ ಷಣ್ಮುಖನು ದೇವತೆಗಳಿಗೆ ಸೇನಾಧಿಪತಿಯಾದದ್ದೂ ನೌಕರಿಯ ಲಕ್ಷಣವಲ್ಲ! ದುಷ್ಟರನ್ನು ಸಂಹರಿಸುವದಕ್ಕೋಸ್ಕರ ಅಸಾಧಾರಣ ಪರಾಕ್ರಮ ಶಾಲಿಗಳಾದ ಕೃಷ್ಣ– ಷಣ್ಮುಖರು ತತ್ಕಾಲದಲ್ಲಿ ಪಾತ್ರ. ಆ– ಆ– ವೇಷನನ್ನು ಧರಿಸಿ ದೇವತಾದಿಗಳಿಗೆ ಸುಖವನ್ನುಂಟು ಮಾಡಿದರು. ಹೀಗೆ ಆಚರಿ ಸಿದ ಇವರಲ್ಲಿ ದೇವತ್ವವು ಎಂದೂ ಲುಪ್ತವಾಗಲಾರದು. ಆದರೆ ಬಿಜ್ಜಳನಲ್ಲಿ ಸುಮಾರು ೧೦–೧೫ ವರ್ಷಗಳ ವರೆಗೆ ನೌಕರಿ ಮಾಡಿದ ನಿಮ್ಮ ಬಸವನಿಗೆ ಕೃಷ್ಣ ಷಣ್ಮುಖಾದಿಗಳ ದೃಷ್ಟಾಂತವು ಸಮಂಜಸವಾಗುವದೋ? ಷಣ್ಮುಖಾದಿಗಳು ದೇವತಾದಿಗಳನ್ನು ಉದ್ಧರಿ ಸಿದರು. ಅವರಂತೆ ನಿಮ್ಮ ಬಸವನು ತನ್ನ ಅಧಿಪತಿಯಾದ ಬಿಜ್ಜಳನನ್ನು ಉದ್ಧರಿಸಿ ದನೋ ಅಥವಾ ಅವನನ್ನೇ ಕೊಲ್ಲಿಸಿದನೊ? ನೀನೇ ಹೇಳು! ಇದರಿಂದ ಬಸವನು ಸ್ವಾರ್ಥ ಕ್ಕಾಗಿ ನೌಕರನಾಗಿದ್ದನೆಂದು ಸಿದ್ಧವಾಗುವದಲ್ಲದೆ ದೇವನೆಂದು ಸಿದ್ಧವಾಗುವದಿಲ್ಲ.

(೬೨–೬೩–ಉ–ವಿ) ಬಸವನು ತನಗೂ ಬಿಜ್ಜಳನಿಗೂ ಮುಂದೆ ಆಗತಕ್ಕ ಜಗಳದ ಸಂಗತಿಯನ್ನು ಮೊದಲೇ ಏಕೆ ತಿಳಿಸಿದನು? ಎಂದು ಪ್ರಶ್ನೆ ಮಾಡಿದ್ದಕ್ಕೆ–ಬಸ ವನು ತ್ರಿಕಾಲ ಜ್ಞಾನಿಯಾದ ಕಾರಣ ಮುಂದಾಗತಕ್ಕ ಜಗಳದ ಸಂಗತಿಯನ್ನು ಮೊದಲೇ ಬಿಜ್ಜಳನ ಮುಂದೆ ಆಡಿದನೆಂದು ಬರೆದಿರುವಿ. ಇವನು ನಿಜವಾಗಿ ತ್ರಿಕಾಲ ಜ್ಞಾನಿಯೇ

ಆಗಿದ್ದ ಪಕ್ಷದಲ್ಲಿ– ಎಲೋ ಬಿಜ್ಜಳನೇ ಮುಂದೆ ನಾನು ಮಾದಿಗರಿಗೂ ಬ್ರಾಹ್ಮಣರಿಗೂ ಲಗ್ನವನ್ನು ಮಾಡಿಸುತ್ತೇನೆ. ಅದಕ್ಕೆ ನೀನು ವಿರೋಧಿಯಾಗಿ ಅವರ ಕಣ್ಣುಗಳನ್ನು ಕೀಳಿಸುವಿ. ಆ ಮೇಲೆ ನಾನು ಜಗದೇವನ ಕಡೆಯಿಂದ ನಿನ್ನನ್ನು ಕೊಲ್ಲಿಸುವೆನು. ಇಷ್ಟೆಲ್ಲ ಮುಂದೆ ಕೃತಿಯು ನಡೆಯುತ್ತದೆ. ಇಷ್ಟಾದರೂ ನನ್ನನ್ನು ಮಂತ್ರಿಯನ್ನಾಗಿ ಇಟ್ಟುಕೊಳ್ಳುವಿಯೋ ಹೇಗೆ? ಎಂದು ಸ್ಪಷ್ಟವಾಗಿ ಮೊದಲೇ ಹೇಳಬೇಕಾಗಿತ್ತಲ್ಲವೇ? ಹೀಗೆ ಹೇಳದೆ "ಜನಾನಾಂ ಕಲಹೇ ಪ್ರಾಪ್ತೇ" ಇತ್ಯಾದಿ ಶ್ಲೋಕಗಳಿಂದ ಕಲಹ ಹಾಗೂ ದ್ರವ್ಯಹರಣದ ವಿಷಯವನ್ನು ಮಾತ್ರ ಹೇಳಿದ್ದು ಕೇವಲ ಕಪಟತನವೆಂದು ತಿಳಿಯದೆ ತ್ರಿಕಾಲ ಜ್ಞಾನಿಯೆಂದು ಬರೆದಿರುವದು ಮಹಾ ಮೂರ್ಖತನವಲ್ಲವೇ?

(೬೪–ಉ–ವಿ.) ಬಿಜ್ಜಳನಿಗೆ ಬಸವನು ಹಿತೋಪದೇಶವನ್ನು ಮಾಡಿದನೆಂದು ಬರೆದಿರುವಿ. ಅವನ ಉಪದೇಶವು ಹಿತವೋ ಅಥವಾ ಕಪಟವೋ ಎನ್ನುವದನ್ನು ಮೇಲಿನ ವಿಮರ್ಶದಲ್ಲಿ ನೋಡು.

(೬೫–ಉ–ವಿ.) ಬಸವನು ಬಿಜ್ಜಳನ ಮುಂದೆ ಆಡಿ ತೋರಿಸಿದಂತೆ ಕಡೆಗೆ ಅವನ ರಾಜ್ಯವನ್ನು ಹಾಳು ಮಾಡಿ ಅವನನ್ನು ಕೊಲ್ಲಿಸಿದ್ದು ಸತ್ಯವೋ ಅಥವಾ ಅಸತ್ಯವೋ? ಎಂದು ಪ್ರಶ್ನೆ ಮಾಡಿದ್ದಕ್ಕೆ– ಬಸವನು ಬಿಜ್ಜಳನನ್ನು ಕೊಲ್ಲಿಸಿಲ್ಲವೆಂದು ಬರೆದಿರುವಿ. ೬೬–೬೮ನೆಯ ಉತ್ತರಗಳಲ್ಲಿ ಬಸವನು ಬಿಜ್ಜಳನನ್ನು ಕೊಲ್ಲಿಸಿದ್ದು ನ್ಯಾಯವೇ ಎಂದು ಬರೆದಿರುವಿ. ಹೀಗೆ ಪರಸ್ಪರ ವಿರುದ್ಧವಾಗಿ ಬರೆಯಬೇಕಾದರೆ ನಿನ್ನ ಮಿದುಳು ಕೆಟ್ಟಂತೆ ತೋರುತ್ತದೆ.

(೬೬–ಉ–ವಿ.) ಬಿಜ್ಜಳನು ಮಧುವಯ್ಯಾದಿಗಳ ಕಣ್ಣುಗಳನ್ನು ಕೀಳಿಸಿದ ಸಿಟ್ಟಿನಿಂದ ಬಸವನು ಬಿಜ್ಜಳನನ್ನು ಕೊಲ್ಲಿಸಿದನೋ ಅಥವಾ ಮೊದಲೇ ಬಿಜ್ಜಳನನ್ನು ಕೊಲ್ಲಿಸಬೇಕೆಂದು ದುರಾಲೋಚನೆಯನ್ನು ಮಾಡಿಕೊಂಡಿದ್ದನೋ? ಎಂದು ಪ್ರಶ್ನೆ ಮಾಡಿದ್ದಕ್ಕೆ– ಬಿಜ್ಜಳನು ನಿರಪರಾಧಿಗಳಾದ ಮಾದಿಗರ ಹರಳಯ್ಯನ ಹಾಗೂ ಬ್ರಾಹ್ಮಣ ಮಧುವಯ್ಯನ ಕಣ್ಣುಗಳನ್ನು ಕೀಳಿಸಿದ ಕಾರಣ ಬಸವನು ಅವನನ್ನು ಕೊಲ್ಲಿಸಿದನೆಂದು ಬರೆದಿರುವಿ. ಕುಲಗಳಲ್ಲಿ ಭೂಮ್ಯಾಕಾಶದಷ್ಟು ಅಂತರವುಳ್ಳ ಮಾದಿಗ ಕುಲದ ಹರಳಯ್ಯನು ತನ್ನ ಮಗನಿಗೆ ಬ್ರಾಹ್ಮಣ ಕುಲದ ಮಧುವಯ್ಯನ ಮಗಳನ್ನು ತೆಗೆದು ಕೊಂಡು ಪರಸ್ಪರ ಶರೀರ ಸಂಬಂಧವನ್ನು ಮಾಡಿದ್ದು ಧರ್ಮಶಾಸ್ತ್ರಾನುಸಾರವಾಗಿ ಭಯಂಕರವಾದ ಅಪರಾಧವಲ್ಲವೇ ಹೇಗೆ! ಅಪರಾಧವಲ್ಲವೆಂದರೆ ನೀನೂ ಹಾಗೂ ನಿನ್ನ ಬಸವನ ಅಭಿಮಾನಿಗಳೂ ಅಂತ್ಯಜರಕೂಡ ಪರಿಶುದ್ಧವಾದ ಶರೀರ ಸಂಬಂಧವನ್ನು ಮಾಡುವಿರೋ ಹೇಗೆ! "ಶಿವೋಕ್ತಾಂ ಜಾತಿಮರ್ಯಾದಾಂ [illegible] ಸರ್ವ

ಕರ್ಮ ಬಹಿಷ್ಕೃತಃ॥" ಎಂಬೀ ಧರ್ಮ ಶಾಸ್ತ್ರದ ಭಯವಿಲ್ಲದೆ ತಮ್ಮ ತಮ್ಮ ಕುಲಗಳ ತಾರತಮ್ಯವನ್ನು ಮೀರಿ ಅತ್ಯಂತ ನೀಚಕೃತಿಯನ್ನು ಮಾಡಿದ ಹರಳಯ್ಯ ಮಧುವಯ್ಯಗಳೆಂಬ ಕುಲಘಾತಕರು ಅಪರಾಧಿಗಳಲ್ಲವೇ? ಇಂಥ ಮಹಾಪರಾಧಿಗಳಿಗೆ ಅವರವರ ಅಪರಾಧಗಳಿಗನುಸರಿಸಿ ಶಿಕ್ಷೆಯನ್ನು ವಿಧಿಸಿ ಮುಂದೆ ಇಂಥ ನೀಚಕೃತಿಗಳಿಗೆ ಒಳಪಟ್ಟು ಧರ್ಮ ಭ್ರಷ್ಟರಾಗುವ ಜನರಿಗೆ ಶಾಸನದ ಭಯದಿಂದ ಸನ್ಮಾರ್ಗವನ್ನು ತೋರಿಸಿದ ಬಿಜ್ಜಳನು ದ್ರೋಹಿಯಾದನೋ? ಮಿಶ್ರ ವಿವಾಹವನ್ನು ಮಾಡುವವರಿಗೆ ರಾಜರು ಶಾರೀರಕ ದಂಡವನ್ನು ವಿಧಿಸಬೇಕೆಂದು ಯಾಜ್ಞವಲ್ಕ್ಯ ನಾರದಾದಿ ಸ್ಮೃತಿಗಳು ರಾಜನೀತಿಯನ್ನು ಬೋಧಿಸುವಂತೆ ಬಿಜ್ಜಳ ಭೂಪಾಲನು ಆ ಅಪರಾಧಿಗಳಿಗೆ ಶಿಕ್ಷೆಯನ್ನು ವಿಧಿಸಿದನು ಅಪರಾಧಿಗಳಿಗೆ ಶಿಕ್ಷೆಯನ್ನು ವಿಧಿಸುವವರು ಶಿವದ್ರೋಹಿಗಳಾಗುವರೋ? ಶಿವನಿಂದುಕ್ತವಾದ ಜಾತಿಯ ತಾರತಮ್ಯವನ್ನು ಕಾಪಾಡುವವನು ಶಿವದ್ರೋಹಿಯೋ ಅಥವಾ ಶಿವಶಾಸನವನ್ನು ಮೀರಿ ಜಾತಿಯ ತಾರತಮ್ಯವನ್ನು ಕೆಡಿಸುವವನು ಶಿವದ್ರೋಹಿಯೋ? ಎನ್ನುವದನ್ನು ಮಹಾ ಬುದ್ಧಿಶಾಲಿಯಾದ ನೀನೇ ಆಲೋಚಿಸು! ಮಹಾರಾಕ್ಷಸ ರೂಪವಾದ ಮಿಶ್ರ ವಿವಾಹ ಸಂಬಂಧವನ್ನು ಕಡಿದು ಹಾಕಿ ಸನಾತನ ಧರ್ಮಕ್ಕೆ ಮಹೋಪಕಾರವನ್ನು ಮಾಡಿ ಧರ್ಮಾತ್ಮನೆನಿಸಿಕೊಂಡ ಬಿಜ್ಜಳನನ್ನು ಕೊಲ್ಲಿಸಿದವನಿಗೆ ಪಾಪಾತ್ಮ ಶಿರೋಮಣಿಯೆಂದು ವೈದಿಕ ಧರ್ಮದವರು ಕೈಯೆತ್ತಿಸಾರ ಬಲ್ಲರು! ಇಂಥ ಧರ್ಮಾತ್ಮನಾದ ಬಿಜ್ಜಳ ಭೂಪತಿಯನ್ನು ಅನ್ಯಾಯವಾಗಿ ಕ್ರೂರ ರೀತಿಯಿಂದ ಕೊಂದು ಮಹಾ ಪಾಪಿಗಳಾದ ಜಗದೇವ ಮಲ್ಲಿಬೊಮ್ಮರೆಂಬವರು ಶಿವಲೋಕಕ್ಕೆ ಹೋಗಲು ಆಗ್ಯೆ ಶಿವನು ಪಾಪಾತ್ಮರಾದ ಅವರನ್ನು ತನ್ನ ಲೋಕದಲ್ಲಿ ಸೇರಿಸಿಕೊಳ್ಳದೆ ನಿರಪರಾಧಿಯಾದ ಬಿಜ್ಜಳನನ್ನು ನೀವು ಕೊಂದಕಾರಣ ಪುನಃ ಭೂಮಿಯಲ್ಲಿ ಹುಟ್ಟಿ ಶೂಲವನ್ನೇರಿ ಪ್ರಾಣವನ್ನು ಬಿಟ್ಟು ನನ್ನ ಲೋಕಕ್ಕೆ ಬನ್ನಿರೆಂದು ಹೇಳಲಾಗಿ ಅದರಂತೆ ಪಾಪಾತ್ಮರಾದ ಜಗದೇವ ಮಲ್ಲಬೊಮ್ಮರು ಭೂಮಿಯಲ್ಲಿ ಹುಟ್ಟಿ ಓರಂಗಲ್ಲ ಎಂಬ ಪಟ್ಟಣವನ್ನಾಳುತ್ತಿದ್ದ ಗಣಪತಿರಾಯನಿಂದ ಶೂಲ ಶಿಕ್ಷೆಯನ್ನನುಭವಿಸಿ ಮುಕ್ತರಾಗಿದ್ದಾರೆಂದು ಚನ್ನಬಸವ ಪುರಾಣದ ೫ ನೆಯ ಕಾಂಡ–೯ ನೆಯ ಸಂಧಿಯ– ೨೫– ೨೬– ೨೭ ನೆಯ ಪದ್ಯ ಗಳಲ್ಲಿ ಸ್ಪಷ್ಟವಾಗಿ ಹೇಳಲ್ಪಟ್ಟಿರುತ್ತದೆ. ಅಂದಮೇಲೆ ಬಿಜ್ಜಳ ಭೂಪತಿಯು ಪಾಪಾತ್ಮನಾದನೋ ಅಥವಾ ಆ ಧರ್ಮಾತ್ಮನನ್ನು ಕೊಂದ ಹಾಗೂ ಕೊಲ್ಲಿಸಲು ಪ್ರೇರಿಸಿದವರು ಪಾಪಾತ್ಮರಾದರೋ ಎನ್ನುವದನ್ನು ನೀನೆ ವಿಚಾರಿಸು!

(೬೭–ಉ–ವಿ.) ಕಣ್ಣುಗಳನ್ನು ಕೀಳಿಸಿದ ಸಿಟ್ಟಿನಿಂದ ಬಸವನು ಬಿಜ್ಜಳನನ್ನು ಕೊಲ್ಲಿಸಿದನೆಂದರೆ ಕಣ್ಣು ಕೀಳಿಸುವದಕ್ಕಿಂತ ಮೊದಲೇ ಜಗದೇವನಿಗೆ, "ಬಹುಕಾಲೇ ವ್ಯತೀತೇತು" ಇತ್ಯಾದಿ ಶ್ಲೋಕಗಳಿಂದ ಬಿಜ್ಜಳನನ್ನು ಕೊಂದು ಮುಕ್ತನಾಗೆಂದು ಆಡಿ ತೋರಿಸಿದ್ದಾನೆ. ಅಂದಮೇಲೆ ಈ ಬಸವನಲ್ಲಿ ಬಿಜ್ಜಳನನ್ನು ಕೊಲ್ಲಬೇಕೆಂಬ ದುರಾ

ಶೋಧನೆಯು ಮೊದಲೇ ಇದ್ದಂತಾಗಲಿಲ್ಲವೇ ಹೇಗೆ? ಎಂದು ಪ್ರಶ್ನೆ ಮಾಡಿದ್ದಕ್ಕೆ– ವೀರ ಶೈವನಾದ ಜಗದೇವನು ಪರಮತದ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿದನೆಂದೂ, ಅವರಿಗೆ ಇವನು ಭೋಜನವನ್ನು ಮಾಡಿಸಿದ ಕಾರಣ ಮಹಾ ದೋಷಗ್ರಸ್ತನಾದನೆಂದೂ, ಈ ದೋಷನಿವಾರಣಕ್ಕಾಗಿ ಯಾವ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕೆಂದು ಪ್ರಶ್ನೆ ಮಾಡಿದನೆಂದೂ, ಇದಕ್ಕೆ ಬಸವನು ಬಿಜ್ಜಳನನ್ನು ಕೊಂದದ್ದಾದರೆ ನಿನ್ನ ದೋಷವೆಲ್ಲ ಹೋಗುವದೆಂದು ಹೇಳಿದನೆಂದೂ, ಬಸವನ ಅಭಿಪ್ರಾಯದಂತೆಯೇ ಜಗದೇವನು ತನ್ನ ಪ್ರಾಯಶ್ಚಿತ್ತಕ್ಕಾಗಿ ಬಿಜ್ಜಳನನ್ನು ಕೊಂದನೆಂದೂ ಕೆಲವು ಶ್ಲೋಕಗಳನ್ನು ತೋರಿಸಿ ನಿನ್ನ ಅಭಿಪ್ರಾಯವನ್ನು ಬರೆದಿರುವಿ; ಅಬ್ಬಬ್ಬಾ– ಇದು ಬಸವನ ಎಂಥ ಪ್ರಾಯಶ್ಚಿತ್ತ ವಿಧಿಯು? ಈ ಪ್ರಾಯಶ್ಚಿತ್ತ ವಿಧಿಯು ಯಾವ ಪ್ರಾಯಶ್ಚಿತ್ತ ಗ್ರಂಥಗಳಲ್ಲಿ ಉಕ್ತವಾಗಿರಬಹುದು? ಯಾವನಾದರೊಬ್ಬ ಶಿವಭಕ್ತನು ಪರಮತದ ಬ್ರಾಹ್ಮಣರಿಗೆ ಅನ್ನವನ್ನು ಕೊಟ್ಟರೆ ದೋಷವು ಬರುತ್ತದಂತೆ! ಆ ದೋಷವನ್ನು ಕಳೆದುಕೊಳ್ಳಬೇಕಾದರೆ ಶಿವದ್ರೋಹಿಯಾದ ರಾಜನನ್ನು ಕೊಲ್ಲಬೇಕಂತೆ! ಜಗತ್ತಿನಲ್ಲಿ ಎಷ್ಟೋ ಜನ ಶಿವಭಕ್ತರು ಪ್ರತಿದಿನದಲ್ಲಿಯೂ ಹಾಗೂ ಮಹಾಮಹಾ ಆರಾಧನಾ ಕಾಲದಲ್ಲಿಯೂ ಪರಮತದ ಬ್ರಾಹ್ಮಣರಿಗೇಕೇ? ಎಷ್ಟೋ ಕೆಳಗಿನ ತರಗತಿಯ ಜನರಿಗೂ ಕೂಡ ಭೋಜನವನ್ನು ಮಾಡಿಸುತ್ತಾರೆ. ಅಂದಮೇಲೆ ಅವರೆಲ್ಲರಿಗೂ ದೋಷವು ಪ್ರಾಪ್ತವಾದಂತಾಯಿತು. ಈ ಪ್ರಕಾರವಾಗಿ ದೋಷಗ್ರಸ್ತರಾದ ಅವರು ರಾಜರನ್ನು ಕೊಂದುಕೊಂಡು ಪರಿಶುದ್ಧರಾಗಬೇಕಾಯಿತು. ವೀರಶೈವರೇ– ಈ ಬುದ್ಧಿವಂತ ಬಸವನ ಉಪದೇಶದಂತೆ ವರ್ತಿಸುವಿರೋ? ಎಲೋ ಲೇಖಕನೇ– ನೀನಾದರೂ ಕೆಲವು ದಿವಸ ಕಾಶಿಯಲ್ಲಿ ಪರಮತದ ಬ್ರಾಹ್ಮಣರಲ್ಲಿ ಅಲ್ಪಸ್ವಲ್ಪ ವಿದ್ಯೆಯನ್ನು ಕಲಿತಿರುವಿ. ಆ ಪಂಡಿತರಿಗೆ ಪ್ರತಿವರ್ಷ ಗುರು ಪೌರ್ಣಿಮೆಯಲ್ಲಿ ಆ ದೇಶಪದ್ಧತಿಯಂತೆ ಫಲಾಹಾರ ದಕ್ಷಿಣಾದಿಗಳನ್ನು ಸಮರ್ಪಿಸಿರುವಿ. ಅಂದ ಮೇಲೆ ಜಗದೇವನಂತೆ ನೀನಾದರೂ ದೋಷಗ್ರಸ್ತನಾದಿಯಲ್ಲವೇ? ಆ ದೋಷ ಪರಿಹಾರಕ್ಕಾಗಿ ಬಸವನ ಭಕ್ತನಾದ ನೀನು ಅವನ ಉಪದೇಶದಂತೆ ಯಾರನ್ನು ಕೊಂದು ದೋಷದಿಂದ ಮುಕ್ತನಾಗಿರುವಿ?

(ತಿಲ–ಉ–ವಿ.) ಬಿಜ್ಜಳನು, ಮುಖ್ಯ ಮಂತ್ರಿಯಾದ ಈ ಬಸವನ ಮೇಲೆ ವಿಶ್ವಾಸವಿಟ್ಟು ತನ್ನ ಯಾವತ್ತು ರಾಜ್ಯಭಾರವನ್ನು ಇವನಿಗೆ ಒಪ್ಪಿಸಿ ಕೊಟ್ಟ ಮೇಲೆ ಇವನು ತನ್ನ ಅಧಿಪತಿಯನ್ನೇ ಕೊಲ್ಲಿಸಿದ್ದು ಸ್ವಾಮಿದ್ರೋಹತನವಲ್ಲವೇ ಹೇಗೆ? ಎಂದು ಪ್ರಶ್ನೆ ಮಾಡಿದ್ದಕ್ಕೆ– ಶಿವದ್ರೋಹಿಯಾದ ಬಿಜ್ಜಳನನ್ನು ಕೊಲ್ಲಿಸಿದ್ದು ಸ್ವಾಮಿ ದ್ರೋಹತನವಲ್ಲವೆಂದು ಉತ್ತರವನ್ನು ಬರೆದಿರುವಿ. ಬಿಜ್ಜಳನಿಗೆ ಶಿವದ್ರೋಹಿಯೆನ್ನುವದು ಮೂರ್ಖತನವು! ಯಾಕಂದರೆ– ಗಿಝನಿ ಮಹಮದ– ಔರಂಗಜೇಬ ಮೊದಲಾದವರಂತೆ ಬಿಜ್ಜಳನು ಯಾವ ಲಿಂಗವನ್ನಾದರೂ ಕಿತ್ತು ಹಾಕಿರುವನೋ? ಯಾವ ಶಿವಾಲಯಗಳ

ನ್ನಾದರೂ ಕೆಡವಿಸಿರುವನೋ? ಯಾವ ಶಿವಭಕ್ತರನ್ನಾದರೂ ತನ್ನ ರಾಜ್ಯದಿಂದ ಓಡಿಸಿರುವನೊ? ಹಾಗೂ ಯಾವ ಶಿವಭಕ್ತರಿಗಾದರೂ ತಮ್ಮ ತಮ್ಮ ಧರ್ಮ ನಿಯಮಗಳನ್ನು ನಡೆಯಿಸಿಕೊಳ್ಳದಂತೆ ನಿರ್ಬಂಧಿಸಿರುವನೋ? ಇವೇ ಮೊದಲಾದವುಗಳನ್ನು ಸಪ್ರಮಾಣವಾಗಿ ತೋರಿಸಬಲ್ಲೆಯಾ? ಅಂದಮೇಲೆ ಬಿಜ್ಜಳನಿಗೆ ಶಿವದ್ರೋಹಿಯೆಂದು ಬರೆಯುವದು ಮಂದತನವಲ್ಲವೇ? ಮಿಶ್ರ ವಿವಾಹದಲ್ಲಿ ತತ್ಪರರಾದ ಹರಳಯ್ಯಾದಿ ಪಾಪಾತ್ಮರ ಕಣ್ಣುಗಳನ್ನು ಕೀಳಿಸಿದ್ದು ಶಿವದ್ರೋಹವಾಗುವದಿಲ್ಲ; ಇಂಥ ಉತ್ತಮ ಕೃತಿಯನ್ನು ಮಾಡಿದ ಬಿಜ್ಜಳ ಭೂಪತಿಗೆ **ಶಿವಶಾಸನ ಪಾಲಕ**ನೆಂದು ಹೇಳುವದರಲ್ಲಿ ಯಾವ ಸಂದೇಹವೂ ಇಲ್ಲ! ಇಂಥ ತನ್ನ ಅಧಿಪತಿಯನ್ನು ಕೊಲ್ಲಿಸಿದವನಿಗೆ ಸ್ವಾಮಿದ್ರೋಹಿಯೆಂದು ಸಾರಿಸಾರಿ ಹೇಳಬಹುದು.

(೬೯–ಉ–ವಿ.) ಸಾಧುವರ್ತನದ ಮಂತ್ರಿಗಳು ತಮ್ಮ ಅಧಿಪತಿಗಳಾದ ರಾಜರನ್ನು ಕೊಲ್ಲಿಸುವದು ಯಾವ ರಾಜನೀತಿಯಲ್ಲಿಯಾದರೂ ಹೇಳಿರುವದೋ? ಎಂದು ಪ್ರಶ್ನೆ ಮಾಡಿದ್ದಕ್ಕೆ– ರಾಜನೀತಿಯನ್ನು ತೋರಿಸದೆ ಸುಮ್ಮನೆ ಅಪ್ರಾಸಂಗಿಕವಾಗಿ ಹರಟೆಯನ್ನು ಕೊಚ್ಚಿರುವಿ; ಮಿಶ್ರ ವಿವಾಹ ತತ್ಪರರಿಗೆ ಶಾಸನವನ್ನು ವಿಧಿಸಿ ಶಿವಧರ್ಮಕ್ಕೆ ಮಹೋಪಕಾರವನ್ನು ಮಾಡಿದ ರಾಜಚೂಡಾಮಣಿಯನ್ನು ಕೊಲ್ಲಿಸಿದ ಬಸವನಿಗೆ ದುಷ್ಟ ಮಂತ್ರಿಯೆಂದು ಹೇಳುವದಕ್ಕೆ ಯಾವ ಸಂದೇಹವೂ ಇಲ್ಲ!

(೭೦–ಉ–ವಿ.) ಬಸವನು ಮಹಿಮಾಶಾಲಿಯಾಗಿದ್ದನೆಂಬ ವಿಷಯದಲ್ಲಿ ಪರಮಾತ್ಮನ ತ್ರಿಪುರವಧ– ಬ್ರಹ್ಮನ ಮೃಗರೂಪ– ವಿಷ್ಣುವಿನ ದಶಾವತಾರಗಳ ದೃಷ್ಟಾಂತವನ್ನು ಕೊಟ್ಟು ಸಾಧಿಸಲುದ್ಯುಕ್ತನಾಗಿರುವಿ; ಬ್ರಹ್ಮ ವಿಷ್ಣು ರುದ್ರರು ಚತುರ್ದಶ ಲೋಕಗಳ ಸೃಷ್ಟಿ– ಸ್ಥಿತಿ– ಸಂಹಾರ ಕಾರ್ಯಾಧಿಪತಿಗಳಾಗಿ ದೇವೋತ್ತಮರೆನಿಸಿಕೊಂಡಿರುವರು. ಇಂಥ ಮಹಿಮರ ದೃಷ್ಟಾಂತವನ್ನು ದುರ್ಮನಸ್ಸಿನಿಂದ ಕೂಡಿದ ಬಸವನ ವಿಷಯದಲ್ಲಿ ಯೋಜಿಸಿರುವದು ಶುದ್ಧ ಅಸಂಗತವು! ಹಾಗಾದರೆ ಲೋಕದಲ್ಲಿರತಕ್ಕ ದುರ್ಮನಸ್ಸಿನ ಜನರಿಗೆ ಬ್ರಹ್ಮವಿಷ್ಣ್ವಾದಿಗಳ ದೃಷ್ಟಾಂತವನ್ನು ಕೊಟ್ಟು ಅವರೆಲ್ಲರೂ ಮಹಿಮಾಶಾಲಿಗಳೆಂದು ಹೇಳುವಲ್ಲಿ ಯಾವ ಬಾಧಕವೂ ಬರಲಾರದು. ವರ್ಣಸಾಂಕರ್ಯದಲ್ಲಿ ಮನಸ್ಸನ್ನು ಹಾಕಿ ದುಶ್ಚಿತ್ತನೆನಿಸಿಕೊಂಡ ಬಸವನಿಗೆ ಮಹಿಮಾಶಾಲಿಯೆಂದು ಹೇಳುವದು ಕೇವಲ ವಿಚಾರಶೂನ್ಯತೆಯೇ ಸರಿ!

(೭೧–ಉ–ವಿ.) ಜಗದೇವನು ಯಾವ ಜಾತಿಯವನು? ಲಿಂಗಧಾರಿಯೆಂದರೆ ಒಬ್ಬನ ಪ್ರೇರಣೆಯಿಂದ ಕೊಲೆಗಡಕತನವನ್ನು ಮಾಡಿದ್ದು ಸ್ವಮತಾಚಾರಕ್ಕೆ ವಿರೋಧವಲ್ಲವೇ ಹೇಗೆ? ಎಂದು ಪ್ರಶ್ನೆ ಮಾಡಿದ್ದಕ್ಕೆ– ಅವನ ಜಾತಿಯನ್ನು ಹೇಳದೆ ಲಿಂಗಧಾರಿಯಾದ ಶಿವಭಕ್ತನೆಂದು ಬರೆದಿರುವಿ. ಶರಣಲೀಲಾಮೃತದ ೮ ನೆಯ ಸಂಧಿಯಲ್ಲಿ

"ಜಗದೇವ ಮೊಲ್ಲಿಬೊಮ್ಮ" ಇವರಿಬ್ಬರು ಗೊಲ್ಲರಿದ್ದರಿಂದು ಸ್ಪಷ್ಟವಾಗಿ ಬರೆದಿರುತ್ತದೆ. ನೋಡು! ಬಿಜ್ಜಳನ ಕೊಲೆಯ ವಿಷಯದಲ್ಲಿ "ಶಿವನಿಂದಾಕರಂದೃಷ್ಟ್ವಾ ಘಾತಯೇದಥವಾ ಶಪೇತ್। ಸ್ಥಾನಂ ವಾ ತತ್ಪರಿತ್ಯಜ್ಯ ಗಚ್ಛೇದ್ಯದ್ಯಕ್ಷಮೋಭವೇತ್॥ ಎಂಬೀ ಶ್ಲೋಕವನ್ನುದಾಹರಿಸಿ ಶಿವನಿಂದಕನಾದ ಬಿಜ್ಜಳನನ್ನು ಕೊಂದದ್ದು ವಿರೋಧವಲ್ಲವೆಂದು ಬರೆದಿರುತ್ತಿ; ಆದರೆ ಬಿಜ್ಜಳನು ಆದಿಯಿಂದಲೇ ಶಿವನಿಂದಕನಾಗಿದ್ದನೋ ಅಥವಾ ಅಂತ್ಯದಲ್ಲಿ ಶಿವನಿಂದಕನಾಗಿದ್ದನೋ? ಆದಿಯಿಂದಲೇ ನಿಂದಕನಾಗಿದ್ದನೆಂದರೆ ಆ ಕಾಲಕ್ಕೆ ಇವನನ್ನು ಯಾಕೆ ಕೊಲ್ಲಿಸಲಿಲ್ಲ? ಕೊಲ್ಲಲಿಕ್ಕೆ ಶಕ್ತಿಯಿಲ್ಲದವನು ಆಸ್ಥಾನವನ್ನು ಬಿಟ್ಟು ಹೋಗಬೇಕೆಂದು ನೀನು ಉದಾಹರಿಸಿರುವ ಶ್ಲೋಕದಲ್ಲಿ ಸ್ಪಷ್ಟವಾಗಿರುತ್ತದೆ. ಆ ಶ್ಲೋಕಾಭಿಪ್ರಾಯದಂತೆ ಇವನಿಗೆ ಮೊದಲು ಕೊಲ್ಲಿಸಲು ಅಷ್ಟು ಶಕ್ತಿಯಿಲ್ಲದಿದ್ದ ಪಕ್ಷದಲ್ಲಿ ಆ ಬಿಜ್ಜಳನಸ್ಥಾನವನ್ನು ಬಿಟ್ಟು ತನ್ನ ಊರಿಗೆ ಹೋಗಬೇಕಾಗಿತ್ತಲ್ಲವೆ? ಅಲ್ಲದೆ ಈ ಬಸವನು ತ್ರಿಕಾಲ ಜ್ಞಾನಿಯಾಗಿದ್ದನೆಂದು ನೀನು ಅಭಿಪ್ರಾಯಪಡುವಿಯಷ್ಟೆ! ತ್ರಿಕಾಲ ಜ್ಞಾನಿಯಾದ ಬಸವನಿಗೆ ಬಿಜ್ಜಳನು ಮಹಾಶಿವದ್ರೋಹಿಯಾಗಿದ್ದಾನೆ; ಇಂಥ ಶಿವದ್ರೋಹಿಯ ನೆರಳು ಸಹ ನನ್ನ ಮೇಲೆ ಬೀಳಬಾರದೆಂದು ತಿಳಿದು ಮೊದಲೇ ಅವನ ಸಂಗವನ್ನು ಬಿಡಬೇಕಾಗಿತ್ತಲ್ಲವೇ? ಹೀಗೆ ಮಾಡದೆ ಬೇಕಾದಷ್ಟು ದಿವಸ ಅವನ ಆಶ್ರಯದಲ್ಲಿದ್ದುಕೊಂಡು ಮಧ್ಯದಲ್ಲಿ ಅವನಿಂದ ಹೊರಗೆ ಹಾಕಿಸಿಕೊಂಡು ಪುನಃ ಅವನಲ್ಲಿ ಬಂದು ಅಧಿಕಾರವನ್ನು ಮಾಡಿದ ಮೇಲೆ ಈ ಬಸವನು ಮೇಲೆ ಉದಾಹರಿಸಿದ ಪ್ರಮಾಣವನ್ನು ಎಷ್ಟು ಉತ್ತಮವಾಗಿ ಮನ್ನಿಸುತ್ತಿದ್ದನೆನ್ನುವದು ಪ್ರತಿಯೊಬ್ಬರಿಗೂ ಕೂಡ ಸ್ಪಷ್ಟವಾಗಿ ತೋರುವಂತಿರುತ್ತದೆ. ಅಸ್ತು! ಇದರ ಮುಖ್ಯಾಭಿಪ್ರಾಯವೇನಂದರೆ— ಬಸವನು ತಾನು ನಡೆಯಿಸಿದ ಮಾದಿಗ— ಬ್ರಾಹ್ಮಣರ ವಿವಾಹ ಕಾರ್ಯಕ್ಕೆ ಬಿಜ್ಜಳನು ವಿಘ್ನವನ್ನು ತಂದನಲ್ಲ! ಆದಕಾರಣ ಇವನನ್ನು ಕೊಲ್ಲಿಸಬೇಕೆಂದು ಮನಸ್ಸಿನಲ್ಲಿ ಆಲೋಚಿಸಿ ಅತ್ಯಂತ ಅನ್ಯಾಯವಾದ ರಾಜವಧೆಯನ್ನು ಮಾಡಿಸಿದನಲ್ಲದೆ ಬೇರೊಂದಿಲ್ಲ; ಈ ಬಸವನು ಮೇಲಿನ ಶ್ಲೋಕಾಭಿಪ್ರಾಯದಂತೆಯೇ ವರ್ತಿಸಿದ್ದಾದರೆ ಬಿಜ್ಜಳನನ್ನು ಎಷ್ಟೋ ದಿವಸಗಳ ಪೂರ್ವದಲ್ಲಿ ಕೊಲ್ಲಿಸಬೇಕಾಗಿತ್ತು. ಹಾಗೆ ಮಾಡದೆ ತನ್ನ ಮನೋರಥವು ಭಂಗವಾದದ್ದಕ್ಕಾಗಿ ಕೊಲ್ಲಿಸಿದ ಕಾರಣ ಈ ವಧೆಯು ಧರ್ಮವಿರೋಧವೂ ಹಾಗೂ ನೀತಿ ವಿರೋಧವೂ ಆದುದೆಂದು ಕೈಯತ್ತಿ ಹೇಳಬಹುದು! ತನ್ನ ಬಲವಾದ ಶಾಸನದಿಂದ ವರ್ಣಸಾಂಕರ್ಯವನ್ನು ದೂರೀಕರಿಸಿ ಸನಾತನ ಧರ್ಮಕ್ಕೆ ಮಹೋಪಕಾರವನ್ನು ಮಾಡಿದ ಬಿಜ್ಜಳನು ದುಷ್ಟರ ಮೋಸದಿಂದ ಅಕಸ್ಮಾತ್ ಮೃತನಾದಾಗ್ಯೂ ಅವನ ಆತ್ಮನು ಧನ್ಯನೇಸರಿ! ಇಂಥ ಶುದ್ಧಾತ್ಮನನ್ನು ಕೊಂದದ್ದು ಕೇವಲ ವಿರೋಧವಲ್ಲದೆ ಬೇರೊಂದಿಲ್ಲ!

(೭೨—ಉ—ವಿ.) "ಅಲ್ಲ" ಹಾಗೂ "ಅಲ್ಲಮ" ಈ ಎರಡೂ ನಾಮಗಳು ಒಂದೇ ವ್ಯಕ್ತಿಗೆ ಇರುವವೇ ಹೇಗೆ? ಇರುವವೆಂದರೆ "ಅಲ್ಲ" ಈ ಶಬ್ದದ ಅರ್ಥವೇನು?

"ಅಲ್ಲಮ" ಈ ಶಬ್ದದ ಅರ್ಥವೇನು? ಹರಳಯ್ಯನಿಗೂ ಕೂಡ "ಅಲ್ಲಮ"ನೆಂದು ಅನ್ನುತ್ತಿದ್ದರೆಂದು ನೀನೇ ಒಪ್ಪಿದಂತಾಯಿತಲ್ಲವೇ? ಹರಳಯ್ಯನಿಗೆ ಈ ಎರಡೂ ನಾಮಗಳಿದ್ದವೆಂದು ಬೇರೆ ಗ್ರಂಥಗಳ ಉದಾಹರಣವನ್ನು ಕೊಟ್ಟಿಲ್ಲ; ಅಂದಮೇಲೆ ನಿನ್ನ ವಾಕ್ಯಗಳನ್ನೇ ಪ್ರಮಾಣಗಳನ್ನಾಗಿ ತಿಳಿಯಬೇಕೇ ಹೇಗೆ? "ಕಣ್ಣುಗಳಿಂದ ನೋಡಲಿಕ್ಕೂ ಕೈಯಿಂದ ಮುಟ್ಟಲಿಕ್ಕೂ ಸಾಧ್ಯನಾಗಿರದ ಆಕಾಶ ಶರೀರಿಯಾದ ಅಲ್ಲಮನ ಕಣ್ಣುಗಳನ್ನು ಕೀಳಿಸಲಿಕ್ಕೆ ಕ್ಷುದ್ರ ಬಿಜ್ಜಳನು ಹ್ಯಾಗೆ ಸಮರ್ಥನಾದಾನು?" ಎಂದು ಅಭಿಪ್ರಾಯ ಪಟ್ಟಿರುವಿ. ಇವನು ಯಾರಿಗೂ ಕಾಣುತ್ತಿದ್ದಿಲ್ಲವೆಂದ ಮೇಲೆ ಮೋಹಜನಕವಾದ ಸುಂದರ ವೇಷವನ್ನು ಧರಿಸಿಕೊಂಡು ಬನವಾಸಿ ಪಟ್ಟಣದಲ್ಲಿ ತಿರುಗಾಡುತ್ತಿದ್ದನೆಂದು ೧೭೭ ನೆಯ ಉತ್ತರದಲ್ಲಿ ನೀನೇ ಬರೆದಿರುವಿ, ಹಾಗೂ ೧೬೬ ನೆಯ ಉತ್ತರದಲ್ಲಿ– ಅಲ್ಲಮನು ಸಾಮಾನ್ಯಹುಡುಗರಂತೆ ಶಾಲೆಗೆ ಕಲಿಯಲಿಕ್ಕೆ ಹೋಗುತ್ತಿದ್ದನೆಂದು ಬರೆದಿರುವಿ. ಇದರ ಮೇಲಿಂದ ಇವನು ಯಾವತ್ತು ಜನರಂತೆ ಕರಚರಣನಖನೇತ್ರಾದಿಗಳುಳ್ಳವನಾದನೋ ಅಥವಾ ಕಣ್ಣುಗಳಿಗೆ ಕಾಣದಂಥವನಾದನೋ? ನೀನೇ ವಿಚಾರ ಮಾಡು! ಇಂಥ ಸಾಕಾರನಾದ ಅಲ್ಲಮನ ಕಣ್ಣುಗಳನ್ನು ಕೀಳಿಸುವದರಲ್ಲೇನಾಶ್ಚರ್ಯವು? ನೀನು ಉದಾಹರಿಸಿರುವ "ನಿತ್ಯಂ ಭಕ್ತಾರ್ಚನೋತ್ಸುಕಃ" ಎಂಬ ವಿಶೇಷಣವಾದರೂ ಅಲ್ಲಮನ ವಿಷಯದಲ್ಲಿ ಯಾವ ಬಾಧೆಯನ್ನೂ ತರಲಾರದು. ಯಾಕಂದರೆ– ವರ್ಣಾಶ್ರಮಗಳನ್ನು ಧಿಕ್ಕರಿಸಿದ ಇವನಿಗೆ ಭಕ್ತನಾದರೂ ಅಷ್ಟೆ! ಮಾಹೇಶ್ವರನಾದರೂ ಅಷ್ಟೆ! ಇದಲ್ಲದೆ ೧೪೯ ನೆಯ ಉತ್ತರದಲ್ಲಿ "ಯಾರು ಸಮ್ಯಜ್ಞಾನ– ಸಮ್ಯಕ್ರಿಯಾ– ಸಮ್ಯಸಂಸ್ಕಾರ ಸಂಪನ್ನರಾಗಿರುವರೋ ಅವರು ಮೊದಲು ಯಾವ ಜಾತಿಯವರಾಗಿದ್ದರೂ ಆ ಮಹಾ ಶಿವಯೋಗಿಗಳ ಎಂಜಲವನ್ನು ಸೇವಿಸುತ್ತೇವೆಂದು ಅಂದುಕೊಂಡಿರುವರು" ಎಂದು ನೀನೇ ಬರೆದಿರುವಿಯಷ್ಟೆ! ಇದರ ಮೇಲಿಂದ ಅಲ್ಲಮನು ಯಾವ ಜಾತಿಯವನ ಎಂಜಲವನ್ನಾದರೂ ತಿನ್ನುತ್ತೇನೆಂದು ಅಂದುಕೊಂಡ ಮೇಲೆ "ನಿತ್ಯಂಭಕ್ತಾರ್ಚನೋತ್ಸುಕಃ" ಎಂಬ ವಿಶೇಷಣದಿಂದಲೂ ಬಾಧೆಯೇನಿರುವದು? ಈ ಯಾವತ್ತು ವಿಚಾರಗಳಿಂದ ಅಲ್ಲಮನೆಂಬುವನು ಹರಳಯ್ಯನಿಗಿಂತ ಬೇರೆಯಾಗಿದ್ದಾನೆಂದು ತೋರುತ್ತದೆ.

(೭೩–ಉ–ವಿ.) ಬಸವನ ಪುರಾಣವು ಅಲ್ಲಮನೆಂಬ ಬೇರೆ ಒಬ್ಬನ ಹೆಸರನ್ನು ತೋರಿಸುತ್ತದಲ್ಲದೆ ಹರಳಯ್ಯನ ಹೆಸರನ್ನು ತೋರಿಸುವದಿಲ್ಲ.

(೭೪–ಉ–ವಿ.) ಅಲ್ಲಮನೆಂದು ಸ್ಪಷ್ಟವಾಗಿರುವದರಿಂದ ವಿರಕ್ತರ ಮೂಲಪುರುಷನಿಗೆ ಹೇಳಲು ಏನಾದರೂ ಸಂದೇಹವಿರುವದೋ!

(೭೫–ಉ–ವಿ.) ಬಿಜ್ಜಳನಿಂದ ಶಿಕ್ಷಿಸಲ್ಪಟ್ಟ ಅಲ್ಲಮನಲ್ಲಿ ನಿರಂಜನತ್ವವು ಸಿದ್ಧಿಸುವದಿಲ್ಲ!

(೨೬—ಉ—ವಿ.) ಬಸವರಾಜ ವಿಜಯದಲ್ಲಿ ಹರಳಯ್ಯನಿಗೆ ಅಲ್ಲಮನೆಂಬ ನಾಮಾಂತರವುಂಟೆಂದು ಉಲ್ಲೇಖಿಸಲ್ಪಟ್ಟಿರುವದಿಲ್ಲ!

(೨೭—ಉ—ವಿ.) ಪುಂಡ— ಮಿಂಡ ಶಬ್ದಗಳ ಸಾಧನೆಯ ವಿಷಯದಲ್ಲಿ ನಿನ್ನ ಮಹಾ ಬುದ್ಧಿಯನ್ನು ಖರ್ಚು ಮಾಡಿರುವದನ್ನು ನೋಡಿದರೆ ಸುಶಿಕ್ಷಿತರು ನಗದೆ ಇರಲಾರರು. ಪುಂಡ— ಮಿಂಡ— ಎಂಬ ವಿಶೇಷಣಗಳು ಲೋಕದಲ್ಲಿ ಕೇವಲ ದುಷ್ಟರಿಗೆ ಪ್ರಯೋಗಿಸಲ್ಪಡುವವಲ್ಲದೆ ಶಿಷ್ಟರಿಗೆ ಪ್ರಯೋಗಿಸಲ್ಪಡುವದಿಲ್ಲ. ಅದರಂತೆ ಬಸವನ ಅಧೀನದಲ್ಲಿಯಾದರೂ ಜಾರ ಚೋರ ಶಿಖಾಮಣಿಗಳಿದ್ದ ಕಾರಣ ಆಗಿನ ಕಾಲದ ಜನರು ಇವರಿಗೆ ಮಿಂಡರೆಂತಲೂ ಪುಂಡರೆಂತಲೂ ಕರೆದಿರುವರಲ್ಲದೆ ನಿನ್ನ ಅಭಿಪ್ರಾಯಕ್ಕನುಸಾರವಾಗಿ ಕರೆದಿರುವದಿಲ್ಲ! ನಿನ್ನ ಅಭಿಪ್ರಾಯದಂತೆಯೇ ಅವರ ವರ್ತನವಿದ್ದದ್ದಾದರೆ ಆಗಿನ ಕಾಲದ ಜನರು ಅವರಿಗೆ ಇಂಥ ದುರ್ನಾಮವನ್ನು ಎಂದೂ ಅನುಗ್ರಹಿಸುತ್ತಿದ್ದಿಲ್ಲವೆಂದು ಭಾವಿಸು! ಈಪುಂಡ— ಮಿಂಡರಿಗೆ ಯಾರು ನಿಜವಾದ ಜಂಗಮರೆಂದು ತಿಳಿಯುವರೋ ಅವರಿಗೆ ನಾಯಿ ಗಳೆಂದೆನ್ನಬೇಕೆಂದು ಕಾಡಸಿದ್ಧೇಶ್ವರ ವಚನಕಾರನು ತನ್ನ ವಚನದಲ್ಲಿ ಸ್ಪಷ್ಟವಾಗಿ ಬರೆದಿರುತ್ತಾನೆ. ನೋಡು.

(೨೮—ಉ—ವಿ.) ೧ ಲಕ್ಷ ೯೬ ಸಾವಿರ ಹರ ಗುರು ಚರ ಮೂರ್ತಿಗಳನ್ನಿಟ್ಟುಕೊಂಡು ಬಸವನು ಭಕ್ತಿಯಿಂದ ಅನ್ನವನ್ನು ಕೊಡುತ್ತಿದ್ದನೆಂದು ಬರೆದಿರುವಿ. ಇಷ್ಟು ಸಂಖ್ಯೆಯಲ್ಲಿ ಹರರು (ಶಿವರು) ಎಷ್ಟು ಜನರಿದ್ದರು? ಗುರುಗಳು ಎಷ್ಟು ಜನರಿದ್ದರು? ಚರರು ಎಷ್ಟು ಜನರಿದ್ದರು? ಈ ವಿವರವನ್ನಾದರೂ ತೋರಿಸಬೇಕಾಗಿತ್ತು; ಯಾಕೋ ತೋರಿಸಿಲ್ಲ. ಇರಲಿ; ೧ ಲಕ್ಷ ೯೬ ಸಾವಿರ ಜನರು ಶುದ್ಧವಂಶದ ಜಂಗಮರಿದ್ದರೆಂದು ನೀನು ತಿಳಿದುಕೊಂಡಂತೆ ತೋರುತ್ತದೆ. ಆದ್ದರಿಂದಲೇ ಅವರಿಗೆ ನೀನು ಲೋಕವ್ಯವಹಾರದಲ್ಲಿದ್ದ ಹರಗುರುಚರ ಮೂರ್ತಿಗಳೆಂದು ಬರೆದಿರುವಿ. ಹುಚ್ಚಾ— ಅವರು ಒಬ್ಬರೂ ಶುದ್ಧ ವಂಶದ ಜಂಗಮರಲ್ಲ! ಬಸವನಿಗೆ ಕ್ರಿಯಾಮೂರ್ತಿಗಳಾಗಿದ್ದ ಅಂತ್ಯಜ ಜಾತಿಯ ಶಿವನಾಗಮಯ್ಯ-ಡೋಹರಕಕ್ಕಯ್ಯ- ಮಾದಿಗರ ಹರಳಯ್ಯ- ಮೇದಾರ ಚನ್ನಯ್ಯ— ಮೇದಾರ ಕೇತಯ್ಯ— ಹಡಪದ ಹಂಪಯ್ಯ— ಮಡಿವಾಳ ಮಾಚಯ್ಯ ಮೊದಲಾದ ಪರಮ ಪವಿತ್ರ ವಂಶೋದ್ಭವರೇ ಬಸವನ ಪೂಜ್ಯ ಜಂಗಮರಾಗಿದ್ದರೆಂದು ತಿಳಿ! ಇಂಥ ಪವಿತ್ರ ವಂಶೋದ್ಭವರೇ ೧ ಲಕ್ಷ ೯೬ ಸಾವಿರ ಜಂಗಮರಿದ್ದರು. ಇಂಥ ಮಹಾ ಜಂಗಮರಿಗೆ ಭಕ್ತಿಯಿಂದ ಅನ್ನವನ್ನು ಕೊಡುತ್ತಿದ್ದ ಬಸವನ ಜನ್ಮವು ಸಫಲವಾದದ್ದೇ ಸರಿ!

(೨೯—ಉ—ವಿ,) ಬಿಜ್ಜಳನ ರಾಜ್ಯದಲ್ಲಿ ಆಗಿಂದಾಗ್ಯೆ ಅನೇಕ ಧಂಗೆಗಳನ್ನು ಮಾಡುತ್ತ ಅಂತ್ಯದಲ್ಲಿ ಆ ಬಿಜ್ಜಳ ಭೂಪತಿಯನ್ನೇ ಕೊಂದು ಪುಂಡಾಟಿಕೆಯನ್ನು ಮಾಡಿದ

ನೀಚ ನೀಚ ಕುಲದಲ್ಲಿ ಜನಿಸಿದ ೧ ಲಕ್ಷ ೯೬ ಸಾವಿರ ಜನರು ಬಸವನ ಗುಪ್ತ ಸೈನಿಕರಾಗಿದ್ದರೆಂದು ಇತಿಹಾಸ ಶೋಧನದಲ್ಲಿ ಪರಮ ಪ್ರಸಿದ್ಧರೂ ನಿಷ್ಪಕ್ಷಪಾತಿಗಳೂ ಆದ ಡಾ॥ ಫ್ಲೀಟ್ ಸಾಹೇಬರು ನಿಜವಾಗಿ ಬರೆದಿದ್ದರೂ ಆ ಮಹಾಶಯರಿಗೆ ಮೂಢಮತಿಯೆಂದು ಬರೆದಿರುವಿ. ಜಗತ್ಪ್ರಸಿದ್ಧರಾದ ಡಾ॥ ಫ್ಲೀಟ್ ಸಾಹೇಬರು ಮೂಢರಾಗಬಹುದೋ ಅಥವಾ ಕೇವಲ ಬಾಗಲಕೋಟೆಯ ಪಾಠಶಾಲೆಯಲ್ಲಿ ಕುಳಿತುಕೊಂಡು ಆ ಊರಭಕ್ತರು ಕೊಡುವ ೨೫ ರೂಪಾಯಿ ಸಂಬಳದಿಂದ ಹೊಟ್ಟೆ ಹೊರೆಯುತ್ತ ಯಾವದೂ ವಿಚಾರವಿಲ್ಲದೆ ಕಣ್ಣು ಮುಚ್ಚಿಕೊಂಡು ಬರೆಯುವ ನೀನು ಮೂಢನಾಗಬಹುದೋ? ಎನ್ನುವದನ್ನು ನೀನೇ ಆಲೋಚಿಸು.

(೮೦–೮೧–೮೨) ಬಸವನು ಮಹಾದೇವ ಭೂಪಾಲನಾಳುತ್ತಿದ್ದ ಮಾಂಡವ್ಯಪುರವನ್ನು ಕೋರಿಶೆಟ್ಟಿಯ ವೇಷದಿಂದ ಪ್ರವೇಶಿಸಿ ಆ ರಾಜನಲ್ಲಿರತಕ್ಕ ೬ ಸಾವಿರ ಜನ ಸೈನಿಕರನ್ನು ಒಡಿಸಿಕೊಂಡು ಬಂದು ತನ್ನ ಸೈನ್ಯವನ್ನು ಬೆಳಸಿದನೋ ಹೇಗೆ? ಎಂದು ಪ್ರಶ್ನೆ ಮಾಡಿದ್ದಕ್ಕೆ ಅಸಾಧಾರಣ ಬುದ್ಧಿಶಾಲಿಯಾದ ನೀನು "ಅಲ್ಲಿರತಕ್ಕ ಶಿವಭಕ್ತಿಸಂಪನ್ನರಾದ ೬ ಸಾವಿರ ಜನರನ್ನು ತೆಗೆದುಕೊಂಡು ತನ್ನ ಉದ್ದೇಶಾನುಸಾರವಾಗಿ ಶಿವಮತವನ್ನು ಬೆಳಸಿದನೆಂದು ಊಹಿಸಲವಕಾಶವಿರುತ್ತದೆ." ಎಂದು ಬರೆದಿರುವಿ; ಇಷ್ಟು ವಿಲಕ್ಷಣವಾದ ಊಹಾಬುದ್ಧಿಯುಳ್ಳ ನಿನಗೆ ಯಾವ ಮಹಾತಾರ್ಕಿಕನು ಗುರುವಾಗಿರುವನೋ ತಿಳಿಯದು! ಅಯ್ಯೋ— ಒಡ್ಡನೇ— ಪರದೇಶದ ಜನರನ್ನು ಕಲ್ಯಾಣ ಪಟ್ಟಣಕ್ಕೆ ತಂದು ತುಂಬಿದರೆ ಶಿವಮತೋದ್ಧಾರವಾಗುವದೋ? ಇದರಂತೆ ಬಸವನು ಯಾವ ಯಾವ ಪಟ್ಟಣದಿಂದ ಎಷ್ಟೆಷ್ಟು ಸಾವಿರ ಜನರನ್ನು ಕಲ್ಯಾಣಕ್ಕೆ ತಂದಿದ್ದನೆನ್ನುವದನ್ನು ತೋರಿಸಬಲ್ಲೆಯಾ? ಒಂದು ಊರಲ್ಲಿದ್ದ ಜನರನ್ನು ಮತ್ತೊಂದು ಊರಿಗೆ ಒಯ್ಯುವದು ಮತೋದ್ಧಾರದ ಲಕ್ಷಣವೋ? ಯಾವ ಕಾಲದಲ್ಲಿಯೇ ಆಗಲಿ ಮತೋದ್ಧಾರಕರೆನ್ನುವವರು ಒಂದು ಊರಲ್ಲಿದ್ದ ಜನರನ್ನು ಮತ್ತೊಂದು ಊರಿಗೆ ಒಯ್ದು ತಮ್ಮ ತಮ್ಮ ಮತಗಳನ್ನು ಉದ್ಧರಿಸಿರುವರೋ? ಹುಚ್ಚಾ— ಹಾಗಲ್ಲ ಕೇಳು; ಮತೋದ್ಧಾರಕರಾದವರು ದೇಶದೇಶಾಂತರಗಳಲ್ಲಿ ಸಂಚರಿಸಿ ತಮ್ಮ ಮತತತ್ವಗಳನ್ನು ಅಲ್ಲಲ್ಲಿಯ ಜನರ ಹೃದಯಪಟಲದಲ್ಲಿ ನೆಲೆಗೊಳಿಸಿ ತಮ್ಮ ಸಿದ್ಧಾಂತವನ್ನು ಸರ್ವತ್ರ ಹಬ್ಬಿಸುವರು. ಹೀಗೆ ಮಾಡುವದೇ ಮತೋದ್ಧಾರಕರ ಕರ್ತವ್ಯವು! ಬಸವನು ನಿಜವಾಗಿ ಮತೋದ್ಧಾರಕನಾಗಿದ್ದ ಪಕ್ಷದಲ್ಲಿ ತಾನು ಪ್ರವೇಶಿಸಿದ ಮಾಂಡವ್ಯಪುರದಲ್ಲಿಯೂ ಹಾಗೂ ಆ ದೇಶದಲ್ಲಿಯೂ ತನ್ನ ಲಿಂಗಾಯತ ಮತದ ತತ್ವವನ್ನು ನೆಲೆಗೊಳಿಸಿ ಅಲ್ಲಿಯೂ ಕೀರ್ತಿವಂತನಾಗುತ್ತಿದ್ದನು. ಹಾಗೆ ಮಾಡದೆ ಕೇವಲ ಕಪಟವೇಷದಿಂದ ಜನಗಳನ್ನು ಕದ್ದು ತಂದದ್ದು ರಾಜ್ಯಸಾಧನೆಗಾಗಿತ್ತೆಂದು ಚನ್ನಾಗಿ ತಿಳಿ! ಇಂಥ [illegible] ರಾಜ್ಯಸಾಧನದಲ್ಲಿ ನಿರತನಾಗಿದ್ದ

ಶಿವಾಜಿ ಮೊದಲಾದವರು ಮಾಡಿರುವದು ಇತಿಹಾಸ ಪ್ರಸಿದ್ಧವೇ ಅದೆ. ಪ್ರಾಚೀನ ರಾಜರ ಇತಿಹಾಸಗಳನ್ನಾದರೂ ಓದಿ ಭ್ರಾಂತಿಯಿಂದ ದೂರನಾಗು.

(೮೧-ಉ-ವಿ. ಬಸವನು ತನ್ನ ಮಹಿಮೆಯಿಂದ ಹಸಿಬಿಯೊಳಗೆ ೬ ಸಾವಿರ ಜನರನ್ನು ಹಾಕಿಕೊಂಡು ಬಂದ ಪಕ್ಷದಲ್ಲಿ ಇವನಿಗೆ **ಚೋರಬಸವನೆಂದೂ** ಹಾಗೂ ಇವನ ಚರಿತ್ರಕ್ಕೆ **ಚೋರಬಸವ ಪುರಾಣವೆಂದೂ** ಅಮಂಗಲಕರವಾದ ಹೆಸರು ಯಾಕೆ ಬಿದ್ದಿತು? ಎಂದು ಪ್ರಶ್ನೆಮಾಡಿದ್ದಕ್ಕೆ- ಕಿರಾತ ವೇಷಧಾರಿಯಾದ ಶಿವನ ಹಾಗೂ ಬೆಣ್ಣೆಯನ್ನು ಕದ್ದ ಕೃಷ್ಣನ ದೃಷ್ಟಾಂತವನ್ನು ಕೊಟ್ಟಿರುವಿ. ಇದು ಕೇವಲ ಅಸಂಗತವು! ಯಾಕಂದರೆ- ಶಿವನು ಹಾಗೂ ಕೃಷ್ಣನು ಬಸವನಂತೆ ದುರುದ್ದೇಶದಿಂದ ಆ ಕೃತಿಯನ್ನು ಮಾಡಿದವರಲ್ಲ; ಆದರೆ ಅರ್ಜುನಾದಿಗಳ ಧೈರ್ಯಾದಿ ಗುಣಗಳನ್ನು ಪರೀಕ್ಷೆ ಮಾಡಿದವರಿರುತ್ತಾರೆ. ಇವರಂತೆ ಬಸವನು ಆಚರಿಸಿಲ್ಲವೆಂದೂ ಅವನು ರಾಜ್ಯದಾಶೆಗಾಗಿ ಕದ್ದು ತಂದನೆಂದೂ ಮೇಲಿನ ವಿಮರ್ಶದಲ್ಲಿ ಸ್ಪಷ್ಟವಾಗಿರುವದು. ಬಸವನ ಕೃತಿಯಂತೆಯೇ ಶಿವ ಕೃಷ್ಣರ ಕೃತಿಯಿದ್ದಲ್ಲಿ ಇವರ ಚರಿತ್ರಗಳಿಗಾದರೂ " **ಚೋರ ಶಿವಪುರಾಣ- ಚೋರ ಕೃಷ್ಣ ಪುರಾಣ** " ಗಳೆಂದು ಹೆಸರುಗಳು ಬೀಳುತ್ತಿದ್ದವು. ಹಾಗೆ ಅವರ ಚರಿತ್ರ ವಿಷಯದಲ್ಲಿ ಚೋರಪದ ಯೋಜನೆಯು ಎಲ್ಲಿಯೂ ಕಂಡು ಬರುವದಿಲ್ಲವಾದ ಕಾರಣ ಈ ದೃಷ್ಟಾಂತವು ಸಂಬಂಧಿಸುವದಿಲ್ಲ; ಬಸವನ ವಿಷಯದಲ್ಲಿ " **ಚೋರಬಸವ- ಚೋರಬಸವ ಪುರಾಣ** " ಎಂದು ಹೆಸರುಗಳಿರುವದರಿಂದ ಇವನು ನಿಜವಾಗಿ ಜನರನ್ನು ಕದ್ದು ತಂದವನೆಂತಲೂ, ಇವನು ಮಹಿಮಾಶಾಲಿಯಲ್ಲವೆಂತಲೂ, ಹಾಗೂ ಚೋರಬಸವ- ಚೋರಬಸವ ಪುರಾಣ ಎಂಬ ಹೆಸರುಗಳು ಕೇವಲ ಅಮಂಗಲಕರಗಳೆಂತಲೂ ಹೇಳಲು ಏನೂ ಸಂದೇಹವಿಲ್ಲ! ಇರಲಿ; " ಈ ಹೆಸರುಗಳನ್ನು ಯಾರು ಅಮಂಗಲವೆಂದು ಭಾವಿಸುವರೋ ಅವರು ವೀರಶೈವ ರೇತೋಜಾತರಲ್ಲೆಂದು ಹೇಳುವದು ಅನುಚಿತವಾಗಲಾರದು" ಎಂದು ಬರೆದಿರುವಿಯಷ್ಟೆ! ನಿಜವಾದ ಅಮಂಗಲನಾಮಗಳಿಗೆ ಅಮಂಗಲಗಳೆಂದು ಹೇಳುವವರು ವೀರಶೈವ ರೇತೋಜಾತರಲ್ಲವೋ ಅಥವಾ ಅಮಂಗಲ ನಾಮಗಳಿಗೆ ಮಂಗಲನಾಮಗಳೆಂದು ಹೇಳುವವರು ವೀರಶೈವ ರೇತೋಜಾತರಲ್ಲವೋ ಎನ್ನುವವನ್ನು ನೀನೇ ಪರ್ಯಾಲೋಚಿಸು.

(೮೨-ಉ-ವಿ) ಬಸವನು **ಮಿಂಡಪುಂಡ** ಜಂಗಮರನ್ನು ಸಾಕಿ ಆ ಜನರ ದುಷ್ಟ ಮನಸ್ಸಿನಂತೆ ಅವರಿಗೆ ಬೇಡಿದ ವಸ್ತ್ರಾಭರಣಗಳನ್ನು ಕೊಟ್ಟು ಸೂಳೆಯರ ಮನೆಗೆ ಕಳಿಹಿಸುತ್ತಿದ್ದನಷ್ಟೆ! ಆದರೆ ದುಷ್ಟ ಜನರನ್ನು ಸನ್ಮಾರ್ಗಕ್ಕೆ ತರದೆ ಪುನಃ ಅವರನ್ನು ಮತ್ತಿಷ್ಟು ದುರ್ಮಾರ್ಗಕ್ಕೆ ದ್ರವ್ಯವನ್ನು ಕೊಟ್ಟು ಹಚ್ಚುವದು ಸತ್ಪುರುಷರ ಲಕ್ಷಣವೇ ಹೇಗೆ? ಎಂದು ಪ್ರಶ್ನೆ ಮಾಡಿದ್ದಕ್ಕೆ- ವ್ಯಭಿಚಾರ ಕೃತಿಯಲ್ಲಿ ನಿರತರಾದ **ಪುಂಡಮಿಂಡ** ಜಂಗಮರ ಮನಸ್ಸಿನಂತೆ ಬೇಡಿದ ವಸ್ತ್ರಾಭರಣಗಳನ್ನು ಕೊಟ್ಟು ಸೂಳೆಯರ ಮನೆಗೆ

ಕಳುಹಿಸುತ್ತಿದ್ದ ಬಸವನು ಅವರ ಗುಣದೋಷಗಳನ್ನು ನೋಡದೆ ಕೇವಲ ಲಾಂಛನವಲ್ಲಿ ಮಾತ್ರ ವಿಶ್ವಾಸವಿಟ್ಟು ವರ್ತಿಸುತ್ತಿದ್ದನೆಂದೂ ಈ ಬಸವನ ವರ್ತನವೇ ಸಮಸ್ತ ಸತ್ಪುರುಷರಿಗೆ ಮಾರ್ಗದರ್ಶಕವಾಗಿರುವದೆಂದೂ ಬರೆದಿರುವಿ; ಅತ್ಯಂತ ಸುಧಾರಣಾ ಸ್ಥಿತಿಯಲ್ಲಿದ್ದ ಈ ೨೦ನೆಯ ಶತಮಾನದಲ್ಲಿ ನಾಚಿಕೆಯನ್ನೆಲ್ಲ ಬಿಟ್ಟು ಹೀಗೆ ಬರೆಯುವ ನಿನ್ನ ಎದೆಗಾರಿಕೆಗೆ ಬೆಲೆಯೇ ಇಲ್ಲವಾಗಿದೆ. ಜಗತ್ತಿನಲ್ಲಿರುವ ಸಮಸ್ತ ವೀರಶೈವ ಸತ್ಪುರುಷರೇ– ಬಸವನ ನಡತೆಯಂತೆಯೂ ಹಾಗೂ ಈ ಲೇಖಕನ ಅಭಿಪ್ರಾಯದಂತೆಯೂ ಯಾರಾದರೂ ದುಷ್ಟ ಜಂಗಮರು ನಿಮ್ಮಲ್ಲಿ ಬಂದು **ವ್ಯಭಿಚಾರಕ್ಕಾಗಿ** ಸಹಾಯ ಮಾಡಿರೆಂದು ಕೇಳಿಕೊಂಡಲ್ಲಿ ಅವರಿಗೆ ಶಿಟ್ಟು ಮಾಡಿ ಬುದ್ಧಿಗಲಿಸದೆ ಅತ್ಯಾನಂದದಿಂದ ದ್ರವ್ಯವನ್ನು ಸಹಾಯಮಾಡಿ ಸತ್ಪುರುಷರೆಂಬ ನಾಮವನ್ನು ಸಾರ್ಥಕ ಮಾಡಿಕೊಂಡು ವೀರಶೈವ ಮತವನ್ನೂ ತನ್ಮೂಲಕ ಭರತಖಂಡವನ್ನೂ ಉದ್ಧರಿಸಿ ಯಶೋಭಾಗಿಗಳಾಗಿರಿ! ಬಸವನು **೧೨ ಸಾವಿರ ಘಟಿಂಗ ಜನರಿಗೆ** ಆಶ್ರಯವನ್ನು ಕೊಟ್ಟಿದ್ದನೆಂದೂ, ಅವರು ಯಾವಾಗಲೂ ವೇಶ್ಯಾಸ್ತ್ರೀಯರ ಮನೆಗಳಲ್ಲಿಯೇ ವಾಸ ಮಾಡಿಕೊಂಡಿದ್ದರೆಂದೂ, ಅವರಿಗೆ ಮನ್ಮಥಕ್ರೀಡೆಯ ಹೊರತು ಮತ್ತಾವ ಉದ್ಯೋಗವಿದ್ದಿಲ್ಲವೆಂದೂ ಸಂಸ್ಕೃತ ಬಸವ ಪುರಾಣದ ೧೧ ನೆಯ ಅಧ್ಯಾಯದಲ್ಲಿ ಬರೆದಿರುತ್ತದೆ. ಇಂಥ ಘಟಿಂಗ ಪ್ರಕರಣದ ಸಂದರ್ಭದಲ್ಲಿ ಶಿರಿಯಾಳನ ಭಕ್ತಿಯನ್ನು ಪರೀಕ್ಷೆ ಮಾಡಲಿಕ್ಕೆ ಬಂದ ಶಿವನ ದೃಷ್ಟಾಂತವನ್ನು ತೆಗೆದುಕೊಂಡಿರುವದು ಕೇವಲ ಪಾಪ ಬುದ್ಧಿಯಲ್ಲದೆ ಬೇರೊಂದಿಲ್ಲ!

(ಲಿ–ಉ–ವಿ.) ಬಸವನು ನೀಚ ನೀಚ ಜಾತಿಯ ಜನರಿಗೆ ಲಿಂಗವನ್ನು ಕಟ್ಟಿ ಅವರಿಗೆ ಜಂಗಮರೆಂದು ಹೆಸರಿಡುವ ಉದ್ದೇಶವೇನಿತ್ತೆಂದು ಪ್ರಶ್ನೆ ಮಾಡಿದ್ದಕ್ಕೆ– "ಶಿವಸಂಸ್ಕಾರ ಸಂಪನ್ನರಾದವರಿಗೆ ಜಂಗಮ ಶಬ್ದವನ್ನು ಪ್ರಯೋಗ ಮಾಡಿ ಪ್ರಸಿದ್ಧ ಪಡಿಸಿದ್ದು ಶಿವಸಂಸ್ಕಾರ ಸಂಪನ್ನರಾದವರೇ ಪರಮಪೂಜ್ಯರೆನ್ನುವದನ್ನು ಲೋಕಕ್ಕೆ ಗೊತ್ತುಪಡಿಸುವ ಸಮುದ್ದೇಶವಲ್ಲದೆ ಮತ್ತಾವ ಉದ್ದೇಶವಲ್ಲ" ಎಂದು ಬರೆದಿರುವಿ. ಅಯ್ಯೋ ಮಂದಮತಿಯೇ ಅಂದಮೇಲೆ ಈಗ ಲಿಂಗಾಯತ ಮತದಲ್ಲಿರತಕ್ಕ ಶಿವಸಂಸ್ಕಾರ ಸಂಪನ್ನರಾದ ಯಾವತ್ತು ಕುಲದ ಜನರಿಗೆ ಅವರಲ್ಲಿ ಶ್ರೇಷ್ಠತೆಯನ್ನು ತೋರಿಸುವದಕ್ಕೋಸ್ಕರ ಬಸವನಂತೆ ಜಂಗಮರೆಂದು ಕರೆಯಬೇಕಾಯಿತಲ್ಲವೇ? ಹೀಗೆ ಕರೆಯುವದು ಧರ್ಮಶಾಸ್ತ್ರಕ್ಕೆ ವಿರೋಧವಲ್ಲವೇ? ಬಸವನು ಡೋಹರ ಕುಲದ ಕಕ್ಕಯ್ಯನಿಗೆ ಮಾದಿಗ ಕುಲದ ಹರಳಯ್ಯನಿಗೆ ಅಗಸ ಕುಲದ ಮಾಚಯ್ಯನಿಗೆ ಕ್ಷೌರಿಕನಾದ ಹಂಪಯ್ಯನಿಗೆ " **ಅಯ್ಯಾ– ಅಯ್ಯಾ** " ನೆಂದು ಕರೆದು ಭಕ್ತಿಯಿಂದ ಅವರ ಪಾದೋದಕ ಪ್ರಸಾದಾದಿಗಳನ್ನು ಸ್ವೀಕರಿಸಿರುತ್ತಾನೆ. ಈ ಬಸವನ ಮಾರ್ಗದಂತೆ ಅವನ ಭಕ್ತನಾದ ನೀನಾಗಲಿ ನಿನ್ನ ಅನುಯಾಯಿಗಳಾಗಲಿ ವರ್ತಿಸುವಿರಾ? **ಕಾಡಶಿದ್ದೇಶ್ವರ ವಚನದ ಜಂಗಮ ಪ್ರಕರಣದಲ್ಲಿ**– " ಸೂಳೆ ಬಸವಿ ಹಾದರಗಿತ್ತಿ ಗಂಡಸತ್ತ ರಂಡೆಮುಂಡೆಯರ ಮಕ್ಕಳ ತಂದು ವಿರಕ್ತರ ಮಾಡಿ

ನಾನೇ ಜಂಗಮ ಜಗದ್ಭರಿತ ದೇವನೆಂದು ಹೇಳುವ ನಾಯಿಗಳ ಕಡಿಂರಾ—ಇದಕ್ಕೆ ಒಪ್ಪಿ ಕೈಕೊಂಡು ನುಡಿಯುವ ಕುನ್ನಿಗಳ ಕಡಿಂರಾ— ಇಂತೀ ಜೀಪಟ್ಟಗಳ ಕರೆತಂದು ನಮ್ಮ ಪ್ರಮಥರ ಪಾವರಕ್ಷೆಯಿಂದ ಅಸಂಖ್ಯ ಹೊಡೆಯಂದಾತ ಗುರು ಕಾಡಸಿದ್ಧೇಶ್ವರ॥ ಎಂದು ಘಂಟಾಘೋಷವಾಗಿ ಹೇಳಿದಂತೆ ಬಸವನು ನೀಚ ನೀಚ ಜಾತಿಯ ಜನರಿಗೆ ಲಿಂಗವನ್ನು ಕಟ್ಟಿ ಜಂಗಮರೆಂದು ಹೆಸರಿಟ್ಟನೆಂದು ಹೇಳದೇ ಸುಮ್ಮನೆ ದುರಭಿಮಾನವನ್ನು ಸಾಧಿಸುವದು ಯೋಗ್ಯವಲ್ಲ! ಜಾತಿಯ ತಾರತಮ್ಯವನ್ನು ದೂರೀಕರಿಸಿ ಅಪೂಜ್ಯರನ್ನು ಪೂಜ್ಯರನ್ನಾಗಿ ಮಾಡುವ ಘೋರ ರಾಕ್ಷಸ ಕೃತಿಯಲ್ಲಿ ತೊಡಗಿದ ಬಸವನ ನಿಜತತ್ವವನ್ನರಿಯದೆ ವಂಶತಾರತಮ್ಯವನ್ನು ಮೀರಿ ಮನಸ್ಸಿಗೆ ಬಂದಂತೆ ಬರೆಯುವದು ಸದ್ವಂಶಜನ ಲಕ್ಷಣವಲ್ಲ! “ಯಸ್ಯೈವಂಶಾಂಭವೀದೀಕ್ಷಾ” ಎಂಬೀ ಸೂಕ್ಷ್ಮಾಗಮದ ಶ್ಲೋಕದಿಂದ ಶಿವಸಂಸ್ಕಾರ ಸಂಪನ್ನನಿಗೆ ಪೂರ್ವ ಜಾತಿಯು ಉಳಿಯುವದಿಲ್ಲವೆಂದು ಬರೆದಿರುವಿ ; ಇದು ಶುದ್ಧತಪ್ಪು. ಯಾಕೆಂದರೆ— ಶಾಸ್ತ್ರದಲ್ಲಿ ಸಾಮಾನ್ಯ ಶಾಸ್ತ್ರವೆಂತಲೂ ವಿಶೇಷ ಶಾಸ್ತ್ರವೆಂತಲೂ ಎರಡು ಪ್ರಕಾರವುಂಟು. ನೀನು ಕೊಟ್ಟಿರುವ ಶ್ಲೋಕವು ಸಾಮಾನ್ಯ ಶಾಸ್ತ್ರಾಂತರ್ಗತವಾಗಿರುತ್ತದೆ. “ಸ್ವಮಾರ್ಗಾಚಾರವರ್ತಿಭ್ಯಃ ಸ್ವಜಾತಿಭ್ಯಃ ಸದಾಪ್ರತೀ | ಪದ್ಯಾತ್ಸೇಭ್ಯಃ ಸಮಾದದ್ಯಾತ್ಕನ್ಯಾಂ ಕುಲಸಮುದ್ಭವಾಂ ॥” ಹಾಗೂ “ಶಿವೋಕ್ತಾಂ ಜಾತಿಮರ್ಯಾದಾಂ ಯೋಽತೀತ್ಯಭುವಿವರ್ತತೇ। ಸಚಂಡಾಲ ಇತಿಜ್ಞೇಯಃ ಸರ್ವಕರ್ಮಬಹಿಷ್ಕೃತಃ ॥ ಎಂದು ಬಲವಾಗಿ ಬೋಧಿಸುವ ವಿಶೇಷ ಶಾಸ್ತ್ರವು ಜಾತಿಯ ತಾರತಮ್ಯವುಂಟೆಂತಲೂ ಅದನ್ನು ಮೀರುವವನು ಚಂಡಾಲನಾಗುವನೆಂತಲೂ ಬೋಧಿಸುವದು ನೋಡು. ಈ ಜಾತಿಯ ತಾರತಮ್ಯದ ವಿಷಯವನ್ನು ತಿಳಿದುಕೊಳ್ಳಬೇಕಾದರೆ “ವೀರಶೈವ ಸಮಾಜವು ಆರ್ಯಸಮಾಜವೋ?” ಎಂಬ ಗ್ರಂಥವನ್ನೋದಿ ಭ್ರಾಂತಿಶೂನ್ಯನಾಗು ; ಈ ಯಾವತ್ತು ವಿಚಾರದಿಂದ ಜಾತಿಯ ತಾರತಮ್ಯವನ್ನು ಮೀರಿ ನೀಚ ನೀಚ ಜಾತಿಯ ಜನರಿಗೆ ಜಂಗಮರೆಂದು ಕರೆದು ಪ್ರಸಿದ್ಧಪಡಿಸಿದ ಬಸವನ ಉದ್ದೇಶವು ಕೇವಲ ದುಷ್ಟವಾದದ್ದೆಂದು ನಿಃಸಂಶಯವಾಗಿ ಹೇಳತಕ್ಕದ್ದು.

(೪೪–ಉ–ವಿ.) ಅನಾದಿಕಾಲದಿಂದ ಬಂದ ಶುದ್ಧವಂಶದ ಮಾಹೇಶ್ವರರನ್ನು ಬಸವನು ಎಲ್ಲಿಯೂ ಹೊಗಳದೆ ಕೇವಲ ನೀಚ ಜಾತಿಯವರನ್ನು ಮಾತ್ರ ಎಡಬಿಡದೆ ಹೊಗಳಿರುವ ಕಾರಣ ಇವನು ಶುದ್ಧ ಸಾಂಪ್ರದಾಯದ ಮಾಹೇಶ್ವರರಿಗೆ ಅತ್ಯಂತ ವಿರೋಧಿಯಾಗಿದ್ದನೆಂದು ಸ್ಪಷ್ಟವಾಗಿ ತೋರುತ್ತದೆ.

(೪೫–ಉ–ವಿ ) ಬಸವನು ವರ್ಣಾಶ್ರಮಗಳನ್ನು ಮನ್ನಿಸುತ್ತಿದ್ದನೋ ಇಲ್ಲವೋ? ಎಂದು ಪ್ರಶ್ನೆ ಮಾಡಿದ್ದಕ್ಕೆ— “ಮೊದಲು ಬ್ರಾಹ್ಮಣನೇ ಇರಲಿ, ಕ್ಷತ್ರಿಯನೇ ಇರಲಿ, ವೈಶ್ಯನೇ ಇರಲಿ, ಶೂದ್ರನೇ ಇರಲಿ, ಲಿಂಗಧಾರಣವನ್ನು ಮಾಡಿಕೊಂಡ ಮೇಲೆ ಅವರೆಲ್ಲರು

ಅಪ್ರಾಕೃತ ಬ್ರಾಹ್ಮಣರೇ ಆಗುವರೆಂದೂ, ಲಿಂಗಧಾರಿಗಳ ಬಗ್ಗೆ ಬ್ರಾಹ್ಮಣ ಕ್ಷತ್ರಿಯಾದಿ ಭೇದಗಳ ವಿವರವನ್ನು ಶಿವಾಗಮಾದಿ ಯಾವ ಗ್ರಂಥಗಳು ಹೇಳುವದಿಲ್ಲವೆಂದೂ ಬರೆದಿರುವಿ" ಇದರ ಮೇಲಿಂದ ನೀನು ಧರ್ಮ ಗ್ರಂಥಗಳನ್ನೇ ಕಣ್ಣೆರದು [ನೋಡಿರುವದಿಲ್ಲವೆಂದು ಸ್ಪಷ್ಟವಾಗಿ ತೋರುತ್ತದೆ. "ವರ್ಣಾಶ್ರಮಾದಿ ಧರ್ಮಾಣಾಂ ವ್ಯವಸ್ಥಾಹಿ ದ್ವಿಧಾಮತಾ। ಏಕಾಶಿವೇನನಿರ್ದಿಷ್ಟಾ ಬ್ರಹ್ಮಣಾಕಥಿತಾಪರಾ॥" ಈ ಪ್ರಕಾರವಾಗಿ ಸಿದ್ಧಾಂತ ಶಿಖಾಮಣಿಯ ವಾಕ್ಯದಿಂದ ಬ್ರಹ್ಮನಿರ್ದಿಷ್ಟ ಚತುರ್ವರ್ಣಾಶ್ರಮಗಳಂತೆ ಶಿವ ನಿರ್ದಿಷ್ಟ ಚತುರ್ವರ್ಣಾಶ್ರಮಗಳಾದರೂ ಇರುತ್ತವೆಂದು ಸ್ಪಷ್ಟವಾಗುತ್ತದೆ. "ವರ್ಣಾಶ್ರಮಸದಾಚಾರಾಃ ಶಿವೇನಕಥಿತಾಃಪುರಾ|ಯೇ ತಾನುಲ್ಲಂಘ್ಯವರ್ತಂತೇ ಶಿವಸ್ಯಾಜ್ಞಾ ಪಲಾಪಿನಃ ॥ ರಾಜಾಜ್ಞಾಭಂಗಕೃನ್ನೄಣಾಂ ಯಥಾದಂಡೋ ಭವಿಷ್ಯತಿ। ಶಿವಾಜ್ಞಾಭಂಗಕೃನ್ನೄಣಾಂ ದಂಡೋಹಿನರಕಸ್ತಥಾ॥" ಈಪ್ರಕಾರವಾಗಿ ಶಂಕರ ಸಂಹಿತೆಯು ವರ್ಣಾಶ್ರಮಗಳು ಶಿವೋಕ್ತಗಳೆಂದೂ ಅವುಗಳನ್ನು ಮೀರಿ ನಡೆಯುವವರಿಗೆ ನರಕವಾಗುವದೆಂದೂ ಬೋಧಿಸುತ್ತದೆ. ಚನ್ನಾಗಿ ನೋಡು! ಹಾಗೂ ಪಾರಮೇಶ್ವರಾಗಮದ ೧೩ನೆಯ ಪಟಲವನ್ನು ನೋಡು.– "ವದ ಲೋಕೋಪಕಾರಾಯ ವೀರಶೈವೇ ವಿಶೇಷಕಂ" ಎಂದು ಪಾರ್ವತಿಯು ಪ್ರಶ್ನೆ ಮಾಡಿದ್ದಕ್ಕೆ– ಪರಮಾತ್ಮನು– ಬ್ರಾಹ್ಮಣಾ ವೀರಶೈವಸ್ಥಾಃ ಶಿಖಾಯಜ್ಞೋಪವೀತಿನಃ| ಲಿಂಗರುದ್ರಾಕ್ಷ ಭಸ್ಮಾಂಕಾ ಬ್ರಹ್ಮಕರ್ಮಸಮಾಶ್ರಿತಾಃ ॥ ೬ ॥ ಎಂಬ ಪ್ರಮಾಣದಿಂದ ವೀರಶೈವಾಂತರ್ಗತ ಶುದ್ಧಶೈವರೇ ಲಿಂಗಧಾರಿ ಬ್ರಾಹ್ಮಣರೆಂತಲೂ "ಮಿಶ್ರಶೈವಾ ಮಹಾದೇವಿ ಕ್ಷತ್ರಿಯಾ ವೈಶ್ಯ ಶೂದ್ರಜಾಃ| ಸುಶೀಲಾಚಾರಸಂಪನ್ನಾಃ ಶೀಲವಂತಶ್ಚಲಿಂಗಿನಃ ॥ ೮ ॥ ಎಂಬೀ ಪ್ರಮಾಣದಿಂದ ವೀರಶೈವಾಂತರ್ಗತ ಮಿಶ್ರಶೈವರೇ ಲಿಂಗಧಾರಿ ಕ್ಷತ್ರಿಯ ವೈಶ್ಯ ಶೂದ್ರರೆಂತಲೂ– "ದ್ವಿಧೈವಾರ್ಥನಪರಾ ರಾಜಾನೋ ಲಿಂಗಿನಃ ಪರೇ | ರಾಜ್ಞಾಂ ಶಿವಾಗಮಸ್ಥಾನಾ ಮೇಷಧರ್ಮಃ ಸನಾತನಃ ॥ ಬಹವೋಮಾರ್ಗಶೈವಾಶ್ಚ ವೀರಶೈವಾನುವರ್ತಿನಃ ॥೧೩–೧೭॥ ಎಂಬೀ ಪ್ರಮಾಣಗಳಿಂದ ವೀರಶೈವಾಂತರ್ಗತ ಮಾರ್ಗಶೈವರೇ ಲಿಂಗಧಾರಿ ರಾಜರೆಂತಲೂ– "ನಾಪಿತಾ ರಜಕಾ ವೇಶ್ಯಾಃಕುಲಾಲಾಸ್ತಿಲಘಾತಕಾಃ| ವೈಶ್ಯಾದ್ಯಾಶ್ಚಾಂತ್ಯಜಾತ್ಯಂತಾ ಸ್ವೇಚ್ಛೈವಾಂತರಶೈವಿನಃ ॥ ೨೬ ॥ ಎಂಬೀ ಪ್ರಮಾಣದಿಂದ ವೀರಶೈವಾಂತರ್ಗತ ಲಿಂಗಧಾರಿ ನಾಪಿತ ರಜಕಾದಿಗಳೇ ಅವಾಂತರಶೈವರೆಂತಲೂ ಸ್ಪಷ್ಟವಾಗಿ ವರ್ಣಗಳ ಹಾಗೂ ಕುಲಗಳ ವಿವರವನ್ನು ಬೋಧಿಸಿದ್ದಾನೆ. ಈ ಪರಮಾತ್ಮನ ಉಪದೇಶದಂತೆ ಇಂದಿಗೂ ಕುಲಗಳ ಭೇದಗಳು ಪ್ರಚಾರದಲ್ಲಿ ಇದ್ದೇ ಇರುತ್ತವೆ. ಇದೂ ಕೂಡ ನಿನಗೆ ಗೊತ್ತಿಲ್ಲವೆ! ಹಾಗೂ ಶಂಕರ ಸಂಹಿತೆಯ ೮೬ ನೆಯ ಅಧ್ಯಾಯವನ್ನು ನೋಡು. ಅಲ್ಲಿ ವರ್ಣಾಶ್ರಮಗಳ ವಿಭಾಗವು ಸ್ಪಷ್ಟವಾಗಿ ಮಾಡಲ್ಪಟ್ಟಿರುತ್ತದೆ. ಇದಲ್ಲದೆ "ಶೂದ್ರಾಣಾಮನ್ಯಜಾತೀನಾಂ ಪತಿತಾನಾಂ ವಿಶೇಷತಃ| ತಥಾಸಂಕರಜಾತೀನಾಂ ನಾಧ್ವಶುದ್ಧಿರ್ವಿಧೀಯತೇ ॥" ಎಂದು ಕ್ರಿಯಾಸಾರವು ಶುದ್ಧವಂಶದ

ವೀರಶೈವರನ್ನು ಬಿಟ್ಟು ಉಳಿದ ಜಾತಿಯವರಿಗೂ ಶೂದ್ರರಿಗೂ ಪತಿತರಿಗೂ ಸಂಕರರಿಗೂ
ಷಡಧ್ವಶೋಧನ ಶೂನ್ಯವಾದ ಲಿಂಗಧಾರಣವನ್ನು ಮಾಡಬೇಕೆಂದು ಸಿಂಹಗರ್ಜನವನ್ನು
ಮಾಡುತ್ತ ಲಿಂಗಧಾರಿಗಳಲ್ಲಿ ಜಾತಿಭೇದವನ್ನು ಉದ್ಘೋಷಿಸಿರುವದನ್ನು ಕೇಳಿಲ್ಲವೋ ?
ಇತ್ಯಾದ್ಯನೇಕ ಪ್ರಮಾಣಗಳಿಂದ ಲಿಂಗಧಾರಿಗಳಲ್ಲಿ ಚತುರ್ವರ್ಣಗಳುಂಟೆಂದು ಸಿದ್ಧವಾ
ಗುತ್ತಿರಲು ವೀರಶೈವ ಮತದಲ್ಲಿ ಚತುರ್ವರ್ಣಗಳನ್ನು ಯಾವ ಗ್ರಂಥಕಾರರೂ ವಿವರಿಸಿ
ರುವದಿಲ್ಲವೆಂದು ಬರೆದಿರುವದು ಮಹಾ ಮೂರ್ಖತನವೇ ಸರಿ ! ಲಿಂಗವನ್ನು ಧರಿಸಿದ
ಹಡಪ- ಅಗಸ- ಚಲವಾದಿ ಮೊದಲಾದ ಪ್ರತಿಯೊಬ್ಬ ಜಾತಿಯವನು ಬ್ರಾಹ್ಮಣನಾ
ಗುತ್ತಾನೆಂದು ಬರೆದಿರುವಿ. **ಅಯ್ಯೋ-ನಿನ್ನ ಹೊಲೆ ಬ್ರಾಹ್ಮಣ್ಯಕ್ಕೆ ಬೆಂಕಿಹಚ್ಚಲಿ!**
ಲಿಂಗಕಟ್ಟಿಕೊಂಡ ಪ್ರತಿಯೊಬ್ಬ ಜಾತಿಯವರು ಅಪ್ರಾಕೃತ ಬ್ರಾಹ್ಮಣರಾಗುತ್ತಾರೆಂದರೆ
ಆ ಮಹಾ ಬ್ರಾಹ್ಮಣರಿಗೆ ನಿನ್ನ ಮಕ್ಕಳು ಮರಿಗಳನ್ನು ಕೊಟ್ಟು ಬೀಗತನವ
ನ್ನು ಮಾಡು. ಅಂದರೆ ನಿನ್ನ ಲೇಖಕ್ಕೆ ಶೋಭೆಯು ಬರುವದು. ಕೃತಿಯಿಂದ ಅದ
ರಂತೆ ವರ್ತಿಸದೆ ಬರೆ ಬಾಯಿಂದ ಬಡಬಡಿಸುವವರು ಧೂರ್ತಶಿಖಾಮಣಿಗಳೂ
ಕುಲಕಂಟಕರೂ ಎಂದು ಹೇಳುವಲ್ಲಿ ಏನೂ ಸಂದೇಹವಿಲ್ಲ. ತಿರುಕನಿಗೆ ರಾಜವೇಷ
ವನ್ನು ಧರಿಸಿದರೆ ಅವನು ರಾಜನಾಗಬಲ್ಲನೋ ? ಅದರಂತೆ ಕಂಡ ಕಂಡ ಜಾತಿಯವರು
ಲಿಂಗವನ್ನು ಧರಿಸಿಕೊಂಡರೆ ಅವರು ಶುದ್ಧವಂಶದ ವೀರಶೈವ ಬ್ರಾಹ್ಮಣರಾಗ ಬಲ್ಲರೋ ?
ಅಸ್ತು ! ವೀರಶೈವ ಮತದಲ್ಲಿ ವರ್ಣಾಶ್ರಮಗಳು ಇದ್ದದ್ದಾದರೆ ಲಿಂಗಾಚಾರ ಸದಾಚಾರಾದಿ
ಪಂಚಾಚಾರಗಳೂ ಸಾಮಾನ್ಯಾದಿ ವೀರಶೈವ ತ್ರಿಭೇದಗಳೂ ಯಾಕೆ ಬೇಕಾಗಿದ್ದವೆಂದು
ಅಭಿಪ್ರಾಯಪಡುವಿಯಷ್ಟೆ ! ವರ್ಣಾಶ್ರಮನಿಷ್ಠರಾದ ವೀರಶೈವರಿಗೆ ಅಷ್ಟಾವರಣಗಳು
ಹ್ಯಾಗೆ ಮಾನ್ಯಗಳಾಗಿರುವವೋ ಅದರಂತೆಯೇ ಪಂಚಾಚಾರಗಳಾದರೂ ಮಾನ್ಯಗಳಾಗಿ
ರುವವು. ಇದರಿಂದ ವರ್ಣಾಶ್ರಮಗಳಿಗೆ ತಿಲಾಂಶವಾದರೂ ಬಾಧಕವಿಲ್ಲ. ವೀರಶೈವ
ರಲ್ಲಿ ಭೇದತ್ರಯವನ್ನು ಮಾಡಿಕೊಂಡಿರುವದು ವರ್ಣಾಶ್ರಮ ಬೋಧಕವಾಗಿರುವದೇ
ಹೊರತು ವರ್ಣಾಶ್ರಮಗಳನ್ನು ತಿರಸ್ಕರಿಸುವದಕ್ಕಾಗಿರುವದಿಲ್ಲ. ಈ ವಿಷಯವು ತೋಂ
ಟದಾರ್ಯರ ಶಿಷ್ಯರಾದ ಚನ್ನಬಸವೇಶ್ವರ ಸ್ವಾಮಿಗಳಿಂದ ರಚಿಸಲ್ಪಟ ವೀರಶೈವೋ
ತ್ಕರ್ಷ ಪ್ರದೀಪಿಕೆಯಲ್ಲಿ- "ತನ್ಮತನಿಷ್ಠೋ ಜಾತ್ಯಾಶ್ರಮಾಚಾರಭೇದೇನ ಸಾಮಾ
ನ್ಯ ವೀರಶೈವೋ ವಿಶೇಷ ವೀರಶೈವೋ ನಿರಾಭಾರ ವೀರಶೈವಶ್ಚೇತಿ ತ್ರಿವಿಧಃ | ತತ್ತಲ್ಲಕ್ಷಣಾ
ನಾಂತು ಕ್ರಿಯಾಸಾರ- ವೀರಶೈವಾಚಾರ ಕೌಸ್ತುಭ-- ವೀರಶೈವಾನಂದ ಚಂದ್ರಿಕಾದಿಷು
ವಿಸ್ತರೇಣೋಕ್ತತ್ವಾತ್ || ತದನುಗತ ಸಂಪ್ರದಾಯಸಿದ್ಧತಯಾ ವಿಚಾರ್ಯಮಾಣೇ ಅಂ
ಬಷ್ಠ ಕುಲಾಲಾದಯೋ ಲಿಂಗಿನಃ ಶೂದ್ರಾಃ ಸಾಮಾನ್ಯ ವೀರಶೈವಾಃ । ಭಕ್ತಮಾಹೇಶ್ವರಾ
ಭಿಧ ಬ್ರಾಹ್ಮಣಾ ಲಿಂಗಧಾರಿಣಃ ಕ್ಷತ್ರಿಯ ವೈಶ್ಯಾಶ್ಚ ವಿಶೇಷ ವೀರಶೈವಾಃ | ಲಿಂಗಾಂಗಿ
ಬ್ರಾಹ್ಮಣಯತಿನೋ ನಿರಾಭಾರಾ ಇತಿ ನಿರ್ಣೀಯತೇ ||" ಈ ಪ್ರಕಾರವಾಗಿ ವೀರಶೈವ

ಭೇದತ್ರಯವು ವರ್ಣಾತ್ಮಕವಾಗಿರುವದೆಂದು ಸ್ಪಷ್ಟವಾಗಿ ನಿರ್ಣಯಿಸಲ್ಪಟ್ಟಿರುವದು.
ಇದನ್ನಾದರೂ ಚನ್ನಾಗಿ ಕಣ್ಣು ತೆರೆದು ನೋಡು. “ಬ್ರಾಹ್ಮಣೋಸ್ಯ ಮುಖಮಾ
ಸೀದಿತಿ ಬ್ರಹ್ಮಪದವಾಚ್ಯ ಶಿವ ಮುಖೋದ್ಭೂತೇಷು ಘಂಟಾಕರ್ಣಾ
ದ್ಯಾಚಾರ್ಯೇಷು ಬ್ರಾಹ್ಮಣ್ಯಸ್ಯ ನಿಸರ್ಗ ಸಿದ್ಧತ್ವಾಚ್ಚ। ತದ್ವಂಶೀಯಾ
ನಾಮಪಿ ಬ್ರಾಹ್ಮಣ್ಯಂ ಸಿದ್ಧಮೇವ॥” ಎಂಬ ವೀರಶೈವ ಸದಾಚಾರ ಸಂಗ್ರ
ಹದ ವಾಕ್ಯವನ್ನು ನಿನ್ನ ಅಭಿಪ್ರಾಯದ ಪುಷ್ಟಿಗಾಗಿ ಉದಾಹರಿಸಿರುವಿ; ಅಯ್ಯೋ ದಡ್ಡಾ–
ಈ ವಾಕ್ಯದ ಅರ್ಥವು ಲಿಂಗಕಟ್ಟಿ ಕೊಂಡ ಸರ್ವರಲ್ಲಿ ಬ್ರಾಹ್ಮಣ್ಯ ವುಂಟೆಂದು ಆಗು
ವದೋ? ಇಷ್ಟು ಕೂಡ ಅರ್ಥ ಮಾಡಲು ಶಕ್ತಿಯಿಲ್ಲದ ನೀನು ಯಾವ ಮಹಾತ್ಮರಲ್ಲಿ
ಸಂಸ್ಕೃತಾಭ್ಯಾಸವನ್ನು ಮಾಡಿ ಪಂಡಿತನಾಗಿರುವಿಯೋ ತಿಳಿಯದು!

(ಆಕ್ಷೇ–ಉ–ವಿ.) ಬಸವನು ವರ್ಣಾಶ್ರಮಗಳನ್ನು ಮನ್ನಿಸುತ್ತಿದ್ದನೆಂದರೆ ಡೋಹ
ರಕಕ್ಕಯ್ಯ– ಮಾದಿಗರ ಹರಳಯ್ಯ– ಮ್ಯಾದಾರ ಚನ್ನಯ್ಯ– ಮ್ಯಾದಾರ ಕ್ಯಾತಯ್ಯ–
ಹಡಪದ ಹಂಪಯ್ಯ–ಮಡಿವಾಳ ಮಾಚಯ್ಯ ಮೊದಲಾದ ಸಾಮಾನ್ಯ ಜಾತಿಯವರೊಡನೆ
ಸಾಮರಸ್ಯವನ್ನು ಹೇಗೆ ಮಾಡಿದನು? ಎಂದು ಪ್ರಶ್ನ ಮಾಡಿದ್ದಕ್ಕೆ “ಶಿವಭಕ್ತರೂ ಶಿವ
ದೀಕ್ಷಾ ಸಂಪನ್ನರೂ ಮಹಾ ಶಿವಶರಣರೂ ಆದ ಡೋಹರ ಕಕ್ಕಯ್ಯ ಮೊದ
ಲಾದ ಪ್ರಮಥರೊಡನೆ ಸಾಮರಸ್ಯವನ್ನು ಮಾಡಿದ್ದು ವಿಹಿತವಿರುತ್ತದೆ. ಸಮಜ್ಞಾನ
ಸಮಕ್ರಿಯಾ ಸಮಸಂಸ್ಕಾರ ಸಂಪನ್ನರೊಡನೆ ಸಾಮರಸ್ಯವನ್ನು ಮಾಡುವದು ಯಾವಾ
ಗಲೂ ಶಾಸ್ತ್ರಸಮ್ಮತವಾಗಿರುವದು ಆದರೆ ವಿಷಮರೊಡನೆ ಸಾಮರಸ್ಯವನ್ನು ಮಾಡು
ವದು ಮಾತ್ರಶಾಸ್ತ್ರ ಸಂಮತವಾದುದಲ್ಲ. ಆದ್ದರಿಂದ ಯಥಾಶಾಸ್ತ್ರವಾಗಿ ಸಾಮರಸ್ಯ
ವನ್ನು ಮಾಡುವದು ಎಂದಿಗೂ ನಿಂದ್ಯವಾಗಲಾರದು.” ಎಂದು ಬರೆದಿರುವಿ. ಬಸವನಿಗೂ
ಹಾಗೂ ಡೋಹರಕಕ್ಕಯ್ಯ ಮೊದಲಾದವರಿಗೂ ಸಮಸಂಸ್ಕಾರಗಳಾಗಿದ್ದವೇ ಹೇಗೆ? ಆಗಿ
ದ್ದವೆಂದರೆ “ಶೂದ್ರಾಣಾಮಂತ್ಯಜಾತೀನಾಂ ಪತಿತಾನಾಂ ವಿಶೇಷತಃ। ತಥಾಸಂಕರಜಾ
ತೀನಾಂ ನಾಧ್ವಶುದ್ಧಿರ್ವಿಧೀಯತೇ॥” ಈ ಪ್ರಕಾರವಾಗಿ ಶೂದ್ರರಿಗೂ ಅಂತ್ಯಜರಿಗೂ
ಪತಿತರಿಗೂ ಸಂಕರಜಾತಿಯವರಿಗೂ ಷಡಧ್ವಶುದ್ಧಿರೂಪವಾದ ಸಂಸ್ಕಾರವನ್ನು ಮಾಡಕೂ
ಡದೆಂದು ಪ್ರಬಲವಾಗಿ ನಿಷೇಧಿಸುವ ಕ್ರಿಯಾಸಾರಾದಿ ವಾಕ್ಯಗಳಿಗೆ ಗತಿಯೇನು! “ಹಂ
ತತೇಕಥಯಿಷ್ಯಾಮಿ ಸರ್ವಪಾಪ ವಿಶೋಧನಂ। ಸಂಸ್ಕಾರಂ ಪರಮಂ ಪುಣ್ಯಂ ಶಿವೇನ
ಪರಿಭಾಷಿತಂ॥ ಸಮ್ಯಕ್ಕೃತಾಧಿಕಾರಃ ಸ್ಯಾತ್ಪೂಜಾದಿಷುನರೋಯತಃ। ಸಂಸ್ಕಾರಃ ಕಥ್ಯ
ತೇತೇನ ಷಡಧ್ವಪರಿಶೋಧನಂ॥ ಈ ಪ್ರಕಾರವಾಗಿ ಸಂಸ್ಕಾರವು ಸರ್ವಪಾಪ ವಿಶೋಧ
ಕವೆಂದೂ, ಸಂಸ್ಕಾರವೇ ಷಡಧ್ವಶೋಧನ ರೂಪವೆಂದೂ, ಈ ಷಡಧ್ವಶೋಧನರೂಪ
ಸಂಸ್ಕಾರದಿಂದ ಯುಕ್ತನಾದವನೇ ಪೂಜಾದಿಗಳಲ್ಲಿ ಅಧಿಕಾರಿಯಾಗುವನೆಂದೂ ಕ್ರಿಯಾ
ಸಾರವು ಕೈಯೆತ್ತಿಸಾರುತ್ತದೆ. ಶಿವದೀಕ್ಷೆಗೆ ಮುಖ್ಯವಾಗಿ ಷಡಧ್ವಶೋಧನವೇ ಅಂಗವಾ

ಗಿರುತ್ತದೆ. ಇಂಥ ದೀಕ್ಷಾ ಮುಖ್ಯಾಂಗಭೂತ ಷಡಧ್ವರೂಪ ಸಂಸ್ಕಾರಕ್ಕೆ ಅನಧಿಕಾರಿಗಳಾದ **ಡೋಹರ ಮಾದಿಗ** ಮೊದಲಾದವರೊಡನೆ ಬಸವನು ಸಾಮರಸ್ಯವನ್ನು ಮಾಡಿದ್ದು ಶಾಸ್ತ್ರ ಸಂಮತವಾಗುವದೋ ? ಇದಲ್ಲದೆ " ವಿರಶೈವಾಭಿಧಾದೀಕ್ಷಾ ವೀರಮಾಹೇಶ್ವರಾಭಿಧಾ। ಏವಂಹಿಭಿದ್ಯತೇದೀಕ್ಷಾ ಭಕ್ತಮಾಹೇಶ್ವರೇಷುಚ ॥ ಎಂದು ವೀರಶೈವ ಸದಾಚಾರ ಸಂಗ್ರಹವು ಶುದ್ಧವಂಶದ ಭಕ್ತರಿಗೂ ಹಾಗೂ ಶುದ್ಧ ವಂಶದ ವೀರಮಾಹೇಶ್ವರರಿಗೂ ಭಿನ್ನ ಭಿನ್ನಗಳಾದ ದೀಕ್ಷಾಸಂಸ್ಕಾರಗಳನ್ನು ಮಾಡಬೇಕೆಂದು ಬೋಧಿಸುವಂತೆ ಅನಾದಿಕಾಲದಿಂದ ಭಕ್ತಮಾಹೇಶ್ವರರಲ್ಲಿಯೂ ಕೂಡ ಸಾಂಪ್ರದಾಯವಾದರೂ ಬಂದಿರುವದು. ಶುದ್ಧ ವಂಶದ ಭಕ್ತಮಾಹೇಶ್ವರರಲ್ಲಿ ದೀಕ್ಷಾ ಸಂಸ್ಕಾರಗಳು ಭಿನ್ನ ಭಿನ್ನಗಳಾಗಿರುವವೆಂದು ಶಾಸ್ತ್ರಕಾರರು ಪ್ರತಿಪಾದಿಸುವಾಗ ಬ್ರಾಹ್ಮಣರಿಗೂ ಅಂತ್ಯಜರಿಗೂ ಸಮಸಂಸ್ಕಾರವನ್ನು ಹೇಳುವದು ಮೂಢತನವಲ್ಲದೆ ಬೇರೊಂದಿಲ್ಲ ! " ಕುಂಡಾನಾಂಗೋಲಕಾನಾಂತು ನಾಸ್ತಿ ದೀಕ್ಷಾವರಾನನೇ" ಎಂದು ಸದಾಚಾರ ಸಂಗ್ರಹದಲ್ಲಿ ಉದಾಹರಿಸಿದ ಶಿವೋಕ್ತಿಯು **ಕುಂಡರಿಗೂ ಗೋಲಕ**ರಿಗೂ ದೀಕ್ಷೆಯನ್ನು ಮಾಡಬಾರದೆಂದು ಶಾಸನವನ್ನು ಮಾಡುವಾಗ ಅಂತ್ಯಜಾತಿಗಳಿಗೆ ದೀಕ್ಷೆಯನ್ನು ಮಾಡಬೇಕೆಂದು ಹೇಳುವದಂತೂ ದೂರೇ ಉಳಿಯಿತು. ಇತ್ಯಾದಿ ಪ್ರಮಾಣಗಳ ವಿಚಾರದಿಂದ ಶಿವದೀಕ್ಷೆಗೆ ಅತ್ಯಂತ ಅನಧಿಕಾರಿಗಳಾದ **ಡೋಹರ– ಮಾದಗ** ಮೊದಲಾದ ಜಾತಿಯವರಲ್ಲಿ ಸಾಮರಸ್ಯವನ್ನು ಮಾಡಿದ ಬಸವನಿಗೆ ಯಾವ ಪದವಿಯನ್ನು ಕೊಟ್ಟರೂ ತೀರದಾಗಿದೆ. ಈ ಉತ್ತರದ ಸಂದರ್ಭದಲ್ಲಿ " ಭಕ್ತಸ್ಯ ಪ್ರಾಕ್ತನಂ ಜನ್ಮನಾಮ ಜಾತ್ಯಾದಿಕಂಚಯತ್ । ಪೃಚ್ಛೇದ್ವಾ ಕಥಯೇದ್ವಾಪಿ ಸರ್ವೈಪಾತಕಿನಾಂವರಃ ॥ ಇತ್ಯಾದಿ ಪ್ರಮಾಣಗಳಿಂದ ಶಿವದೀಕ್ಷಾ ಸಂಪನ್ನರಾದವರಲ್ಲಿ ಪೂರ್ವದ ಜಾತ್ಯಾದಿಗಳನ್ನು ಸ್ಮರಿಸ ಕೂಡದೆಂದು ಅಭಿಪ್ರಾಯ ಪಟ್ಟಿರುವಿಯಷ್ಟೆ ! ಹುಚ್ಚಾ– ಲಿಂಗಧಾರಣ ಮಾತ್ರದಿಂದ ಪ್ರಾಕೃತ ಜಾತಿಗಳು ನಷ್ಟಗಳಾದಾಗ್ಯೂ ಅದರ ಹಿಂದೆ ಅಪ್ರಾಕೃತ ರೂಪದಿಂದ ಇದ್ದೇ ಇರುತ್ತದೆ. ಲಿಂಗಧಾರಣದಿಂದ ಕೂಡಿದ ಜಾತಿಗಳ ತಾರತಮ್ಯ ವಿಷಯವನ್ನು ೮೫ ನೆಯ ವಿಮರ್ಶದಲ್ಲಿ ಪಾರಮೇಶ್ವರಾಗಮ ಪ್ರಮಾಣಗಳಿಂದ ಸ್ಪಷ್ಟೀಕರಿಸಿದೆ. ನೋಡು ! ಲಿಂಗಧಾರಣ ಮಾತ್ರದಿಂದ ಜಾತಿಗಳು ಉಳಿಯುವದಿಲ್ಲವೆಂಬ ವಿಷಯದಲ್ಲಿ ನೀನು ೫–೬ ಶ್ಲೋಕಗಳನ್ನು ಉದಾಹರಿಸಿ ಎಷ್ಟೋ ಜಿಗಿದಾಡಿರುವಿ. ಆದರೆ ಇದೇ ವಿಷಯದ ಬಗ್ಗೆ **ವೀರಶೈವಧರ್ಮ ಶಿರೋಮಣಿಕಾರರು** ದ್ವಿತೀಯ ಪರಿಚ್ಛೇದದ ೨೮ ನೆಯ ಪದ್ಯದ ವ್ಯಾಖ್ಯಾನದಲ್ಲಿ ಅನೇಕ ಶ್ಲೋಕಗಳನ್ನು ಪೂರ್ವ ಪಕ್ಷಗಳನ್ನಾಗಿ ಉದಾಹರಿಸಿ ನಿನ್ನಂತೆಯೇ ಜಾತಿಭೇದವಿಲ್ಲವೆಂದು ಮೊದಲು ಸಾಧಿಸುತ್ತ ಬಂದು ಅಂತ್ಯದಲ್ಲಿ " ತ್ವಂ ದೇವೇಷು ಬ್ರಾಹ್ಮಣೋಽಹಂ ಮನುಷ್ಯೇಷು ಬ್ರಾಹ್ಮಣಃ। ಬ್ರಾಹ್ಮಣೋಽಪ್ಯೈ ಬ್ರಾಹ್ಮಣಮುಪಧಾವತ್ಯುಪಧಾವಾಮಿ ॥ ಇತಿ ಶ್ರುತ್ಯಾ ಶಿವಾಭಿನ್ನಾನಾಂ ಲಿಂಗಾಂಗಸಂಗಿನಾಂ ಬ್ರಾಹ್ಮಣ್ಯಮಪಿ ಸೂಚಿತಂ ಭವತಿ। ಏವಂಚ ನತತ್ರ ಜಾತಿಭೇದೋಸ್ತೀತಿ ವಚನಾನಾಂ ಲಿಂಗಾಂಗ ಸಾಮರಸ್ಯ ರೂಪಜೀವನ್ಮುಕ್ತಿ ಸಂಪನ್ನ ಶಿವಾರೂಢ

ಪರತ್ವಂ | ವಸ್ತುತಸ್ತು— ಯೇ ಶಿವಜ್ಞಾನ ಹೀನೈರುಕ್ತವಕ್ಷ್ಯಮಾಣ ಬಹಿರಾಚಾರಾಂ ಸ್ತ್ಯಕ್ತ್ವಾ ಸ್ವೇಚ್ಛಾಚಾರ ಪರೈರದೀಕ್ಷಿತೈಃ ಸ್ವಾಪಕೃಷ್ಟ ಜಾತಿಭಿರ್ಲಿಂಗಧಾರಣ ಮಾತ್ರ ಶಾಲಿಭಿಃ ಸಂಪ್ರದಾಯ ಶುದ್ಧ ವೀರಶೈವ ಮತಾನುಗಾ ಬ್ರಾಹ್ಮಣಾದಯಃ – ನತತ್ರಜಾತಿ ಭೇದೋಸ್ತೀತ್ಯಾದಿ ವಚನ ಪ್ರಮಾಣ್ಯಕ ಶರಣಾ ಅಭೇದಬುದ್ಧ್ಯಾ ಭೋಜನಾದಿಕ ಸಂ ಬಂಧಂ ಕುರ್ವಂತಿ ತೇ— ಶಿವೋಕ್ತಾಂ ಜಾತಿಮರ್ಯಾದಾಂ ಯೋತೀತ್ಯಭುವಿವರ್ತತೇ। ಸ ಚಂಡಾಲ ಇತಿಜ್ಞೇಯಃ ಸರ್ವಕರ್ಮ ಬಹಿಷ್ಕೃತಃ ॥ ಇತಿವಚನಾವಗತ ಪ್ರತ್ಯವಾಯ ಬದ್ಧಾದೇಹಾಂತೇ ನರಕಯಾತನಾಮನು ಭವಂತೀತಿ ದಿಕ್ ॥" ಈ ಪ್ರಕಾರವಾಗಿ "ನತ ತ್ರಜಾತಿಭೇದೋಸ್ತಿ" ಇತ್ಯಾದಿ ಪ್ರಮಾಣಗಳನ್ನೇ ಮುಖ್ಯವಾಗಿಟ್ಟುಕೊಂಡು ಲಿಂಗ ಧಾರಿಗಳಲ್ಲಿ ಜಾತಿಭೇದಗಳಿರುವದಿಲ್ಲವೆಂದು ತಿಳಿದು ಶುದ್ಧ ಸಾಂಪ್ರದಾಯವುಳ್ಳ ಯಾವ ವೀರಶೈವ ಬ್ರಾಹ್ಮಣಾದಿಗಳು ತಮಗಿಂತ ಕಮ್ಮಿ ಜಾತಿಯವರಾದ ಲಿಂಗಧಾರಿಗಳೊಡನೆ ಅಭೇದ ಬುದ್ಧಿಯಿಂದ ಭೋಜನಾದಿ ಸಂಬಂಧವನ್ನು ಮಾಡುವರೋ ಅವರು ದೇಹಾಂತ ದಲ್ಲಿ ನರಕಯಾತನೆಯನ್ನನುಭವಿಸುವರೆಂದು ಡಂಗುರವನ್ನು ಸಾರಿರುವರು. ಆ ದಿಗ್ವಿ ಜಯ ಪಂಡಿತರ ಉಪದೇಶಾಮೃತವನ್ನಾದರೂ ಪಾನಮಾಡಿ ನಿನ್ನ ಅಮಂಗಲಾಂತಃ ಕರ ಣವನ್ನು ಸ್ವಚ್ಛವಾಗಿ ತೊಳೆದುಕೊಂಡು ಧನ್ಯನಾಗು. ಹಾಗೂ "ಶಿವೇತಿ ಮಂಗಲಂ ನಾಮ ಯಸ್ಯವಾಚಿ ಪ್ರವರ್ತತೇ | ಸಪ್ತಜನ್ಮ ಕೃತಂಪಾಪಂ ಭಸ್ಮೀಭವತಿ ತಸ್ಯವೈ॥ ವದೇ ತ್ತೇನ ವಸೇತ್ತೇನ ಪಿಬೇತ್ತೇನ ಪುನಃಪುನಃ| ಭುಂಜೀತ ಸಹ ಭುಂಜೀತೇ ತ್ಯಾಹಸಾಮಶ್ರುತಿಃ ಶಿಲು ॥ ಎಂಬೀ ಶ್ಲೋಕಗಳನ್ನು ಲಿಂಗಧಾರಿಗಳಲ್ಲಿ ಜಾತಿ ಭೇದವಿರುವದಿಲ್ಲವೆಂಬ ವಿಷಯ ದಲ್ಲಿ ಪ್ರಮಾಣಗಳನ್ನಾಗಿ ತೆಗೆದುಕೊಂಡಿರುವಿ ಯಷ್ಟೆ! ಇದರ ಮೇಲಿಂದ ನಿನ್ನ ದಡ್ಡತ ನಕ್ಕೆ ಅಳತೆಯೇ ಇಲ್ಲವೆಂದು ಸಣ್ಣ ಹುಡುಗರಿಗೂ ಕೂಡ ತಿಳಿದು ಬರುವಂತಿರುತ್ತದೆ. ಹುಚ್ಚನೇ— ಈ ಶ್ಲೋಕಗಳು ನಿನ್ನ ಅಭಿಪ್ರಾಯವನ್ನು ಪುಷ್ಟೀಕರಿಸುವವೆಂದು ತಿಳಿದಿರುವಿ ಯೇನು ? ಹಾಗಲ್ಲ! ಯಾವನು ಶಿವನಾಮವನ್ನುಚ್ಚರಿಸುವನೋ ಅವನಲ್ಲಿ ಜಾತಿ ಭೇದ ವನ್ನು ನೋಡದೆ ಅವನೊಡನೆ ಉಣ್ಣಬೇಕೆಂದು ಬೋಧಿಸುತ್ತವೆ. ಅಂದಮೇಲೆ ಈ ಪ್ರಮಾಣಗಳಿಗನುಸಾರವಾಗಿ ಲಿಂಗಧಾರಣವಾದರೂ ಯಾತಕ್ಕೆ ಬೇಕು! ಯಾರು ಶಿವ– ಶಿವ— ಎಂದನ್ನುವರೋ ಅಂಥ ಹೊಲೆ ಮಾದಿಗರಲ್ಲಿಯೂ ಕೂಡ ಉಣ್ಣಬೇಕಾಯಿತು. ಉಣ್ಣಬಹುದೆಂದರೆ ಇಲ್ಲಿಯ ವರೆಗೆ ಎಷ್ಟೋ ಕಷ್ಟಪಟ್ಟು ಯಾವ ಜಾತಿಯವರೇ ಇರಲಿ ಲಿಂಗಧಾರಣದಿಂದ ಯುಕ್ತರಾದವರಲ್ಲಿ ಮಾತ್ರ ಊಟ ಮಾಡಬೇಕೆಂದು ಧರ್ಮಲಂಡತ ನದಿಂದ ಸಾಧಿಸಿದ ನಿನ್ನ ಸಾಹಸವೆಲ್ಲ ಹೊಳೆಯಲ್ಲಿ ಹುಣಸಿ ಹಣ್ಣು ತೊಳೆದಂತಾಗಲಿಲ್ಲವೇ ಹೇಗೆ? ದಡ್ಡಾ— ಆದಕಾರಣ ಮನಸ್ಸಿಗೆ ಬಂದಂತೆ ಉನ್ಮತ್ತನಂತೆ ಬರೆಯುವದು ಕುಲ ಭ್ರಷ್ಟತನವು! "ಶಿವೇತಿ ಮಂಗಲಂ ನಾಮ" ಇತ್ಯಾದಿ ಶ್ಲೋಕಗಳು ಶಿವನಾಮ ಪ್ರಾಶ ಸ್ತ್ಯವನ್ನು ಬೋಧಿಸುವದಕ್ಕಾಗಿ ಹೇಳಲ್ಪಟ್ಟಿರುವವೇ ಹೊರತು ಜಾತಿಗಳನ್ನು ಕೆಡಿಸುವದ

ಕ್ಕಾಗಿ ಹೇಳಲ್ಪಟ್ಟವುಗಳಿರುವದಿಲ್ಲ. ಇದರಂತೆಯೇ ಶ್ರೀಶಂಕರಾಚಾರ್ಯರಾದರೂ "ಚಂಡಾಲೋಸ್ತು ಸತುದ್ವಿಜೋಸ್ತು ಗುರುರಿತ್ಯೇಷಾಮನೀಷಾಮಮ ||" ಎಂದು ಜ್ಞಾನಿಯ ಪ್ರಾಶಸ್ತ್ಯವನ್ನು ತೋರಿಸುವದಕ್ಕೋಸ್ಕರ ಅಂದು ಕೊಂಡಿರುತ್ತಾರೆ. ಇದರಿಂದ ಆ ಶಂಕರಾಚಾರ್ಯರು ಯಾವ ಚಂಡಾಲನನ್ನಾದರೂ ಗುರುವನ್ನಾಗಿ ಮಾಡಿ ಕೊಂಡಿದ್ದರೋ? ಇದರಂತೆ ಬ್ರಾಹ್ಮಣ- ಚಂಡಾಲ- ಎಂಬ ಭೇದ ಭಾವವನ್ನು ತೋರಿಸದೆ ವರ್ತಿಸತಕ್ಕದ್ದೆಂದು ತಮ್ಮ ಶಿಷ್ಯ ಸಮೂಹಕ್ಕೆಲ್ಲ ಬೋಧಿಸಿದರೋ? ಅದರಂತೆ ಇಂದಿನವರಿಗೂ ಅವರ ಮತಾನುಯಾಯಿಗಳು ವರ್ತಿಸುತ್ತ ಬಂದಿರುವರೋ? ಇದನ್ನೆಲ್ಲ ವಿಚಾರ ಮಾಡದೆ ಒಮ್ಮೆಲೆ ಧಡಂಪ್ರವೇಶ ಮಾಡುವದು ಬುದ್ಧಿವಂತರ ಲಕ್ಷಣವಲ್ಲ! ಜ್ಞಾನ ಪ್ರಾಶಸ್ತ್ಯವನ್ನು ತೋರಿಸುವದಕ್ಕೋಸ್ಕರ ಶಂಕರಾಚಾರ್ಯರು ಯಾವ ಪ್ರಕಾರವಾಗಿ ಜಾತಿ ಭೇದವನ್ನೆಣಿಸದೆ ಅಂದುಕೊಂಡಿರುವರೋ ಅದರಂತೆಯೇ ನೀನು ಕೊಟ್ಟಿರುವ ಜಾತ್ಯಭೇಧ ಪ್ರತಿಪಾದಕ ಶ್ಲೋಕಗಳಾದರೂ ಲಿಂಗಧಾರಣ ಪ್ರಾಶಸ್ತ್ಯವನ್ನು ತೋರಿಸುವದಕ್ಕೋಸ್ಕರ ಹೇಳಲ್ಪಟ್ಟಿರುವವೆಂದು ಚನ್ನಾಗಿ ತಿಳಿದುಕೊಳ್ಳು! ಈ ಯಾವತ್ತು ವಿಚಾರಗಳಿಂದ ಲಿಂಗಧಾರಿಗಳಲ್ಲಿ ವರ್ಣಾಶ್ರಮಗಳೂ ಹಾಗೂ ಜಾತಿಗಳೂ ಉಂಟೇ ಉಂಟೆಂದು ಸಿದ್ಧವಾಯಿತು. "**ಶಿವೋಕ್ತಾಂ ಜಾತಿಮರ್ಯಾದಾಂ**" ಎಂಬೀ ಪ್ರಮಾಣದಿಂದ ಜಾತಿ ತಾರತಮ್ಯವನ್ನು ಮೀರಿ ನಡೆಯುವವನು **ಸರ್ವಕರ್ಮ ಬಹಿಷ್ಕೃತನೂ ಚಂಡಾಲನೂ** ಆಗುವನೆಂದು ಸಿದ್ಧವಾಗುತ್ತಿದ್ದಾಗ್ಯೂ ಹಾಗೂ "ಸ್ವಮಾರ್ಗಾಚಾರನಿರತಾಃ ಸಜಾತೀಯಾದ್ವಿಜಾಸ್ತುಯೇ | ತೇಷಾಂಗೃಹೇಷುಭುಂಜೀತ ನೇತರೇಷಾಂಕದಾಚನ ||" ಈ ಪ್ರಕಾರವಾಗಿ ಸಿದ್ಧಾಂತ ಶಿಖಾಮಣಿಯ ಭಕ್ತಮಾರ್ಗ ಕ್ರಿಯಾಸ್ಥಲದಲ್ಲಿ- ಸಜಾತೀಯ ವೀರಶೈವ ಬ್ರಾಹ್ಮಣರು ಸಜಾತೀಯ ವೀರಶೈವ ಬ್ರಾಹ್ಮಣರಲ್ಲಿಯೇ ಉಣ್ಣಬೇಕೆಂದೂ, ಎರಡನೆಯವರ ಮನೆಯಲ್ಲಿ ಉಣ್ಣಬಾರದೆಂದೂ ಶಾಶನವನ್ನು ಮಾಡಿದಾಗ್ಯೂ ಅದನ್ನು ಲಕ್ಷಕ್ಕೆ ತರದೆ ಬಿಜ್ಜಳ ಭೂಪಾಲನ ರಾಜ್ಯವನ್ನು ಅಪಹರಿಸಬೇಕೆಂಬ ದುರುದ್ದೇಶದಿಂದ ಕೆಳಗಿನ ತರಗತಿಯ ಒಂದೊಂದು ಜಾತಿಗೆ ಪ್ರಮುಖರಾದ ಕಕ್ಕಯ್ಯ- ಹರಳಯ್ಯ- ಹಂಪಯ್ಯ- ಚನ್ನಯ್ಯ- ಕ್ಯಾತಯ್ಯ- ಮಾಚಯ್ಯ ಇವರೇ ಮೊದಲಾದ ಜನರನ್ನು ದೊಡ್ಡವರೆಂದು ಉಬ್ಬಿಸಿ ಅವರನ್ನುಪೂಜಿಸಿ ಅವರವರ ಪಂಗಡದ ಅಸಂಖ್ಯ ಲಂತಜನರನ್ನು ಕೂಡಿ ಹಾಕಿಕೊಂಡು ತನ್ನ ರಾಜ್ಯಪ್ರಾಪ್ತಿ ಕಾರ್ಯವನ್ನು ಸಾಧಿಸಲು ಸಾಹಸಪಟ್ಟ ಬಸವನು ಧರ್ಮಶಾಸ್ತ್ರವಿರುದ್ಧವಾಗಿ ಕಂಡ ಕಂಡ ಜಾತಿಯ ಜನರಲ್ಲಿ ಸಾಮರಸ್ಯವನ್ನು ಮಾಡಿದ್ದು ಕೇವಲ ಧರ್ಮ ದ್ರೋಹವೆಂದು ಪ್ರತಿಯೊಬ್ಬ ಧಾರ್ಮಿಕ ಪುರುಷರಿಗೆ ಸ್ಪಷ್ಟವಾಗಿ ತಿಳಿಯುತ್ತಿದ್ದಾಗ್ಯೂ ನೀನು ಮಾತ್ರ **ಹೊಲೆ ಮಾದಿಗರಲ್ಲಿ ಉಣ್ಣುವದು ಯೋಗ್ಯವೆಂದು** ಉತ್ತರ ಕೊಡುವದನ್ನು ನೋಡಿದರೆ **ನಿನ್ನ ಭಂಡತನಕ್ಕೆ** ಎಣೆಯಿಲ್ಲವೆಂದು ಸಾರಾಸಾರ ವಿಚಾರಶೀಲರು ಹೇಳದೆ ಇರಲಾರರು! ನೀನು ೧ ಲಕ್ಷ ೯೬ ಸಾವಿರ

ಲಂತ ಜನರಿಗೆ ಪ್ರಮಥರೆಂದು ಅನ್ನವಿಯುಷ್ಟೆ! ಈ ಮಹಾ ಪ್ರಮಥರು ಕೈಲಾಸದ ಕದಗಳನ್ನು ಬಂದು ಮಾಡಿ ಬಸವನಿಂದ ದ್ವಿತೀಯ ಕೈಲಾಸವೆನಿಸಿಕೊಂಡ ಕಲ್ಯಾಣಕ್ಕೆ ಬಂದು ಯಾವ ಲೋಕೋದ್ಧಾರ ಕಾರ್ಯವನ್ನು ಮಾಡಿದರೋ ತಿಳಿಯದು! ಪರಮಪವಿತ್ರವೂ ಜಗನ್ಮಾನ್ಯವೂ ಆದ ವೀರಶೈವ ಬ್ರಾಹ್ಮಣ ಧರ್ಮವನ್ನು ಕೆಡಿಸಿ ಅದನ್ನು ಸಂಕರ ಮಾಡುವದಕ್ಕಾಗಿಯೂ, ಸೂಳೆಯರ ಮನೆಗಳಲ್ಲಿ ಮಲಗಿಕೊಳ್ಳುವದಕ್ಕಾಗಿಯೂ, ಬಿಜ್ಜಳನ ರಾಜ್ಯವನ್ನು ಹಾಳುಮಾಡಿ ಅವನನ್ನು ಕೊಲ್ಲುವದಕ್ಕಾಗಿಯೂ ಬಂದಿರಬಹುದಲ್ಲವೇ! ಅಹಾ! ಪ್ರಮಥ ಪುಂಗವರೆಂದರೆ ಇವರಿಗೆ ಅನ್ನಬೇಕು. ಶಾಂತಂಪಾಪಂ! ಶಾಂತಂಪಾಪಂ !!

(೮೭—ಉ—ವಿ.) ಮೇಲಿನ ವಿಮರ್ಶೆಗಳಿಂದ ಬಸವನು ವರ್ಣಾಶ್ರಮಗಳನ್ನು ಮನ್ನಿಸುತ್ತಿದ್ದಿಲ್ಲವೆಂದು ಸ್ಪಷ್ಟವಾಗುವಕಾರಣ ಹಾಗೂ ಇವನು ವೇದಗಳಿಗೆ ವಿರೋಧಿಯಾಗಿದ್ದ ಕಾರಣ ಅವನ ವರ್ತನವು ಪರಮ ವೈದಿಕವಾದ ವೀರಶೈವ ಧರ್ಮಶಾಸ್ತ್ರಕ್ಕೆ ಸಮ್ಮತವಿದ್ದಿಲ್ಲವೆನ್ನುವದೇ ಸಿದ್ಧಾಂತವು!

(೮೮—ಉ—ವಿ.) ನಾಮದಾರ ಪಟೀಲರ ಮಿಶ್ರ ವಿವಾಹದ ಬಿಲ್ಲನ್ನು ಈ ಬಸಪ್ಪನು ತನ್ನ ಆಳಿಕೆಯಲ್ಲಿ ಮಾದಿಗರ ಹರಳಯ್ಯನ ಹಾಗೂ ಬ್ರಾಹ್ಮಣ ಮಧುವಯ್ಯನ ಸಂಬಂಧದಿಂದ ರೂಢಿಯಲ್ಲಿ ತರಲು ಯತ್ನಿಸಿದನೋ ಇಲ್ಲವೋ? ಎಂದು ಪ್ರಶ್ನೆ ಮಾಡಿದ್ದಕ್ಕೆ— ಲಿಂಗವನ್ನು ಧರಿಸಿಕೊಂಡ ಬ್ರಾಹ್ಮಣ ಮಧುವಯ್ಯನ ಹಾಗೂ ಲಿಂಗವನ್ನು ಧರಿಸಿಕೊಂಡ ಮಾದಿಗರ ಹರಳಯ್ಯನ ವಿವಾಹ ಸಂಬಂಧವು ಯಥಾಶಾಸ್ತ್ರವೆಂದು ಉತ್ತರವನ್ನು ಬರೆದಿರುವಿ. ಲಿಂಗಕಟ್ಟಿಕೊಂಡ ಮಾದಿಗನಿಗೂ ಹಾಗೂ ಲಿಂಗವನ್ನು ಧರಿಸಿಕೊಂಡ ಬ್ರಾಹ್ಮಣನಿಗೂ ವಿವಾಹವಾಗುವದರಲ್ಲಿ ಏನೂ ಅಡ್ಡಿಯಿಲ್ಲವೆಂದು ವಿಧಾನ ಮಾಡುವ ಶಾಸ್ತ್ರ ಪ್ರಮಾಣಗಳನ್ನು ತೋರಿಸಿದ್ದರೆ ನೆಟ್ಟಗಾಗುತ್ತಿತ್ತು. ಹಾಗೆ ಮಾಡದೆ ಉನ್ಮತ್ತನಂತೆ ಉಚ್ಚರಿಸಿರುವ ನಿನ್ನ ವಾಕ್ಯಗಳೇ ಪ್ರಮಾಣಗಳೇ ಹೇಗೆ? ನಿನ್ನ ವಾಕ್ಯದಂತೆ ನಿನ್ನ ಮನೆತನದಲ್ಲಿ ಯಾವ ಕಾಲದಲ್ಲಿಯಾದರೂ ಈ ತರದ ಮಿಶ್ರ ವಿವಾಹ ಪದ್ಧತಿಯು ನಡೆದಿರಬಹುದು! ಆದ್ದರಿಂದಲೇ ಇಂಥ ವಾಕ್ಯಗಳು ನಿನ್ನ ಮುಖದಿಂದ ಹೊರಬಿದ್ದಿವೆ. ಸಾಧು! ಸಾಧು! (೪೪ ನೆಯ ವಿಮರ್ಶವನ್ನು ನೋಡು.)

(೮೯—ಉ—ವಿ.) ಬಸವನು ಪಂಚಪರುಷಗಳ ಮಹಿಮೆಯಿಂದ ೧ ಲಕ್ಷ ೯೬ ಸಾವಿರ ಜನರಿಗೆ ದಾಸೋಹವನ್ನು ಮಾಡುತ್ತಿದ್ದನೆಂದೂ, ಇಷ್ಟು ಜನರಿಗೆ ದಾಸೋಹವನ್ನು ಮಾಡುವದು ರಾಜರಿಗೂ ಕೂಡ ಸಾಧ್ಯವಿಲ್ಲೆಂದೂ ಬರೆದಿರುವಿಯಷ್ಟೆ! ಈಗಿನ ನಮ್ಮ ಭರತಖಂಡದ ಅಧಿಪತಿಗಳು ಪ್ರತಿದಿವಸ ೭—೮ ಲಕ್ಷ ಜನ ಸೈನಿಕರಿಗೆ ಅನ್ನವನ್ನು ಕೊಡುತ್ತಾರೆ. ಜೇಲು ಬಿದ್ದವರಂತೂ ಲೆಖ್ಖವೇ ಇಲ್ಲ; ಹಾಗೂ ಹಿಂದಕ್ಕೆ ಜರ್ಮ

ನಿಯ ಯುದ್ಧದಲ್ಲಿ ಪ್ರತಿದಿವಸ ೫೦ ಲಕ್ಷ ಜನಕ್ಕೆ ಅನ್ನವನ್ನು ಕೊಡುತ್ತಿದ್ದರು. ಸುಮಾರು ೨ ಲಕ್ಷ ಜನರಿಗೆ ಅನ್ನವನ್ನು ಕೊಡುತ್ತಿದ್ದ ನಿಮ್ಮ ಬಸವನಿಗೆ ಪಂಚಪರುಷಗಳಿದ್ದ ವೆಂದಮೇಲೆ ಪ್ರತಿದಿನಸ ೫೦ ಲಕ್ಷ ಜನಕ್ಕೆ ಅನ್ನವನ್ನು ಕೊಡುತ್ತಿದ್ದ ಬ್ರಿಟಿಶ್ ಪ್ರಭುಗಳಿಗೆ ನೂರಾರು ಪರುಷಗಳಿದ್ದವೆಂದು ಹೇಳಬಹುದಲ್ಲವೇ ?

(೯೦-ಉ-ವಿ.) ಪಂಚ ಪರುಷಗಳಿಗೆ ಸಿದ್ಧಗಳೆಂದು ನೀನು ಬರೆದಿರುವಿಯಷ್ಟೆ! ಪರುಷಗಳೆಂದರೆ ಸಿದ್ಧಿಗಳಲ್ಲ! ಪರುಷವೆಂದರೆ ಒಂದು ತರದ ಮಣಿಯು! ಅದು ಕಬ್ಬಿಣವನ್ನು ಮಾತ್ರ ಬಂಗಾರವನ್ನು ಮಾಡಬಲ್ಲದು; ಎರಡನೆಯ ಯಾವ ಕಾರ್ಯವೂ ಅದರಿಂದಾಗದು. “ಅಣಿಮಾ ಮಹಿಮಾಚೈವ ಗರಿಮಾ ಲಘಿಮಾ ತಥಾ| ಪ್ರಾಪ್ತಿಃ ಪ್ರಾಕಾಮ್ಯಮೀಶಿತ್ವಂ ವಶಿತ್ವಂಚಾಷ್ಟಸಿದ್ಧಯಃ ॥” ಎಂದು ಸಿದ್ಧಿಗಳು ಎಂಟು ವಿಧವಾಗಿರುವವು. ಶ್ರೀಜಗದ್ಗುರು ರೇಣುಕಾಚಾರ್ಯರು ಈ ಅಷ್ಟಸಿದ್ಧಿಗಳಿಂದ ಯುಕ್ತರಾಗಿದ್ದರಲ್ಲದೆ ಬಸವನಂತೆ ಅಶಾಸ್ತ್ರೀಯ ಸಿದ್ಧಿಗಳೆಂಬ ಹೆಸರುಳ್ಳ ಪಂಚ ಪರುಷಗಳಿಂದ ಯುಕ್ತರಾಗಿದ್ದಿಲ್ಲ; ಇವರು ಶಿವಯೋಗಿ ಸಾರ್ವಭೌಮರಾದ ಕಾರಣ ಪರ್ಣಕುಟೀರದಲ್ಲಿಯೇ ವಾಸಮಾಡುತ್ತಿದ್ದರಲ್ಲದೆ ಬಸವನಂತೆ ಮಂತ್ರಿಗಳಾಗಿ ಚಿತ್ರವಿಚಿತ್ರವಾದ ಅರಮನೆಯಲ್ಲಿ ವಾಸಮಾಡುತ್ತಿದ್ದಿಲ್ಲ. ಅಣಿಮಾದ್ಯಷ್ಟ ಸಿದ್ಧಿಗಳುಳ್ಳ ಭಗವತ್ಪಾದರಿಗೆ ಸುವರ್ಣಮಯವಾದ ಮಠವನ್ನು ಮಾಡಬೇಕೆಂಬ ಇಚ್ಛೆಯು ಯಾತಕ್ಕೆ ಉಂಟಾದೀತು ? ಬಸವನು ಜೋಳವನ್ನು ಮುಟ್ಟಿ ಮುತ್ತುಗಳನ್ನು ಮಾಡಿದನೆಂದು ಅವನ ಪುರಾಣದಲ್ಲಿ ಬರೆದಿರುವ ಕಾರಣ ತನ್ನ ಅರಮನೆಯನ್ನು ಮುಟ್ಟಿ ಅದನ್ನು ಸುವರ್ಣಮಯವನ್ನಾಗೇಕೆ ಮಾಡಲಿಲ್ಲವೆಂಬ ಪ್ರಶ್ನ ಕರ್ತನ ಅಭಿಪ್ರಾಯವನ್ನು ತಿಳಿಯದೆ ಬಸವನು ಸ್ರಕ್ಚಂದನ ವನಿತಾದಿ ಭೋಗಾಪೇಕ್ಷೆಯಿಲ್ಲದವನಾದ ಕಾರಣ ತನ್ನ ಅರಮನೆಯನ್ನು ಸುವರ್ಣಮಯವನ್ನಾಗಿ ಮಾಡಲಿಲ್ಲನೆಂದು ಉತ್ತರವನ್ನು ಬರೆದಿರುವಿ. ದಡ್ಡನೇ– ಬಸವನಿಗೆ ಸ್ರಕ್ಚಂದನ ವನಿತಾದಿ ಭೋಗಾಪೇಕ್ಷೆಯು ಇದ್ದಿಲ್ಲವೋ ? ಮೊದಲು ತನ್ನ ಸೋದರ ಮಾವನ ಮಗಳಾದ ಗಂಗವ್ವನನ್ನು ಭೋಗಾಪೇಕ್ಷೆಯಿಂದ ಲಗ್ನವಾಗಿದ್ದರೂ ಅದೂ ಸಾಲದೆ ಪುನಃ ಬಿಜ್ಜಳನ ತಂಗಿಯಾದ ನೀಲವ್ವನನ್ನು ಲಗ್ನವಾದ ಮೇಲೆ ಇವನು ಎಷ್ಟು ಭೋಗಾಪೇಕ್ಷಿಯಾಗಿದ್ದನೆಂದು ಸರ್ವರಿಗೂ ಒಡೆದು ತೋರುತ್ತದೆ. ನೀಲವ್ವನು ಬಿಜ್ಜಳನ ತಂಗಿಯಾಗಿದ್ದಳೆಂಬ ವಿಷಯವನ್ನು ಶಿಂಗಿರಾಜ ಪುರಾಣದಲ್ಲಿ ನೋಡು. ಈ ಯಾವತ್ತು ವಿಚಾರಗಳಿಂದ ಬಸವನಿಗೆ ಸಿದ್ಧನೆಂದು ಹೇಳುವದು ಅಬದ್ಧವಲ್ಲವೇ ?

೯೧–ಉ–ವಿ.) ಬಸವನು ಜೋಳವನ್ನು ಮುಟ್ಟಿ ಮುತ್ತುಗಳನ್ನು ಮಾಡಿದನೆಂದಮೇಲೆ ನಿತ್ಯ ಕಳವು ಮಾಡತಕ್ಕ ಕನ್ನದ ಬೊಮ್ಮಯ್ಯನಿಗೆ ಕಳವು ಮಾಡಲಿಕ್ಕೆ ತನ್ನ ಒಪ್ಪಿಗೆಯನ್ನೇಕೆ ಕೊಟ್ಟನು ? ಇದೇ ಏನು ಪಂಚಪರುಷರ ಪ್ರಭಾವ ! ಎಂದು

ಪ್ರಶ್ನ ಮಾಡಿದ್ದಕ್ಕೆ- ಕನ್ನದ ಬೊಮ್ಮಯ್ಯನು ಗುರು- ಲಿಂಗ- ಜಂಗಮರ ದಾಸೋಹ ವ್ರತಕ್ಕಾಗಿ ಕಳ್ಳತನವನ್ನು ಮಾಡುವ ಕಾರ್ಯವನ್ನು ಕೈಕೊಂಡಿದ್ದನೆಂದೂ, ಒಂದಾನೊಂದು ದಿವಸ ಬಿಜ್ಜಳನ ಕೋಶಾಗಾರಕ್ಕೆ ಕನ್ನವನ್ನು ಹಾಕಿ ದ್ರವ್ಯವನ್ನು ತೆಗೆದುಕೊಂಡು ಹೋದನೆಂದೂ, ಈ ಸುದ್ದಿಯನ್ನು ಬಿಜ್ಜಳನು ಚಾರರ ಮುಖದಿಂದ ಕೇಳಿ ಬಂದು ನೋಡುವಷ್ಟರಲ್ಲಿ ದ್ರವ್ಯವು ಇದ್ದಂತೆ ಇತ್ತೆಂದೂ, ಕನ್ನಹಾಕಿದ ಸ್ಥಾನವು ಬಂಗಾರವಾಗಿ ಹೊಳೆಯುತ್ತಿತ್ತೆಂದೂ, ಅವನು ಮುಟ್ಟಿದ ಸಮಸ್ತ ಪದಾರ್ಥಗಳು ಸುವರ್ಣಮಯಗಳಾಗಿದ್ದವೆಂದೂ ಅಭಿಪ್ರಾಯವನ್ನು ತೋರಿಸಿರುವಿ. ಇಂಥ ಅದ್ಭುತ ಶಕ್ತಿಯುಳ್ಳ ಕನ್ನದ ಬೊಮ್ಮನು ತನ್ನ ದಾಸೋಹ ವ್ರತಕ್ಕಾಗಿ ಕಳವು ಮಾಡುವ ಉದ್ಯೋಗವನ್ನೇಕೆ ಕೈಕೊಂಡಿದ್ದನು ? ಇವನು ಮುಟ್ಟಿದ ಪದಾರ್ಥಗಳೆಲ್ಲವು ಸುವರ್ಣಮಯಗಳಾಗುತ್ತಿದ್ದರೆ ತನ್ನ ಮನೆಯಲ್ಲಿರತಕ್ಕ ಕೂರಿಗೆ- ಕುಂಟೆ- ಮಡಿಕೆ- ಮನಿಕೆ- ಕಟ್ಟಿಗೆ ಮೊದಲಾದವುಗಳನ್ನು ಮುಟ್ಟಿ ಸುವರ್ಣಮಯಗಳನ್ನಾಗಿ ಮಾಡಿಕೊಂಡು ಅದರಿಂದ ತನ್ನ ದಾಸೋಹವನ್ನು ಸಾಗಿಸದೆ ರಾತ್ರಿಯೆಲ್ಲ ನಿದ್ದೆಗೇಡಿಯಾಗಿ ಅತಿಕಷ್ಟದಿಂದ ಗೋಡೆಯನ್ನೊಡೆದು ಕೈ ನೂಸಿಕೊಂಡು ಗೃಹಸ್ಥರ ಮನೆಗಳನ್ನು ಪ್ರವೇಶಿಸಿ ಅವರ ಸಂಪತ್ತನ್ನೇಕೆ ಅಪಹರಿಸಿಕೊಂಡು ಬರುತ್ತಿದ್ದನು ? ಒಬ್ಬರ ಮನೆಗೆ ಕನ್ನವನ್ನು ಹಾಕಿ ಅವರಿಗೆ ದುಃಖವನ್ನು ಕೊಟ್ಟು ದಾಸೋಹವನ್ನು ನಡೆಯಿಸುವದು ಯಾವ ತರದ ಭಕ್ತಿಯ ಲಕ್ಷಣವೋ ತಿಳಿಯದು ! ಇಂಥ ಭಕ್ತಿಯ ಲಕ್ಷಣವು ಯಾವ ಧರ್ಮ ಶಾಸ್ತ್ರದಲ್ಲಿ ಉಕ್ತವಾಗಿರುವದೋ ನಾವಂತೂ ಕಾಣೆವು ! ಇಂಥ ಮಹಾನು ಭಾವರು ಧರ್ಮೋದ್ಧಾರಕ್ಕಾಗಿ ಬಂದಿದ್ದರೆಂದು ಅಭಿಪ್ರಾಯಪಡುವಿ. ಇಂಥ ಚೋರ ಧರ್ಮವು ನಮ್ಮ ಭರತ ಖಂಡದಲ್ಲಿ ಸ್ಥಾಪಿತವಾದರೆ ಈ ಖಂಡವು ಧನ್ಯವೇ ಸರಿ ! ಈ ಸದ್ವ್ರತವನ್ನು ನೀನಾದರೂ ಕೈಕೊಂಡು ದ್ವಿತೀಯ ಕನ್ನದ ಬೊಮ್ಮನೆಂಬ ಹೆಸರಿನಿಂದ ಲೋಕದಲ್ಲಿ ಪ್ರಸಿದ್ಧನಾಗು !

(೯೨-ಉ-ವಿ.) ಬಸವ ಶಬ್ದವು ಸಂಸ್ಕೃತವಲ್ಲವೆಂದೂ, ಇದು ಕನ್ನಡ ಶಬ್ದವಾದ ಕಾರಣ ಮಂತ್ರಾತ್ಮಕವಲ್ಲವೆಂದೂ, ಬಸವ ಮಂತ್ರವು ಯಾವ ಮಂತ್ರ ಗ್ರಂಥಗಳಲ್ಲಿಯೂ ಉಕ್ತವಾಗಿಲ್ಲವೆಂದೂ ೪೧ ನೆಯ ವಿಮರ್ಶದಲ್ಲಿ ಹೇಳಲ್ಪಟ್ಟಿದೆ. ಇಂಥ ಬಸವ ಶಬ್ದವನ್ನುಚ್ಚರಿಸುವವರು ಈಗ್ಯೂ ಕೂಡ ಬೀಳುವದಿಲ್ಲವೆಂದೂ ಹಾಗೂ ಸಾಯುವದಿಲ್ಲವೆಂದೂ ಬರೆದಿರುವಿ. ಲೇಖಕನೇ- ಈಗ ಪ್ರತ್ಯಕ್ಷವಾಗಿ ಎಷ್ಟೋ ಜನ ಬಸವನ ಭಕ್ತರು ಎಡಬಿಡದೆ " ಬಸವ- ಬಸವ " ಎಂದು ಅನ್ನುತ್ತಿದ್ದರೂ ಬಿದ್ದು ಕೈಕಾಲುಗಳನ್ನು ಮುರಿದುಕೊಂಡು ವೈದ್ಯಾಲಯಗಳಲ್ಲಿ ಚಿಕಿತ್ಸೆಯನ್ನು ಹೊಂದುತ್ತಿರುವರು. ಬಸವಾ- ಬಸವಾ ಎಂದು ಬಾಯಿಬಿಡುತ್ತ ಸಾಯುತ್ತಿರುವರು. ಇದನ್ನು ಪ್ರತ್ಯಕ್ಷವಾಗಿ ಸರ್ವರು ನೋಡುತ್ತಿದ್ದಾಗ್ಯೂ ಈ ಸುಧಾರಿಸಿದ ಕಾಲದಲ್ಲಿ ಈಪ್ರಕಾರವಾಗಿ ಬರೆದಿರುವದು ನಿನ್ನ ಮಂಕುಬುದ್ಧಿಯ ಪ್ರಭಾವವೇ ಸರಿ ! ನೀನು ಹೇಳಿದಂತೆ ಬಸವ ಶಬ್ದದಲ್ಲಿ

ಛೀಳಗೊಡದಂತೆಯೂ ಹಾಗೂ ಸಾಯಗೊಡದಂತೆಯೂ ಮಾಡುವ ಶಕ್ತಿಯಿದ್ದರೆ ಏಸಿಯಾ- ಯುರೋಪ- ಆಫ್ರಿಕಾ- ಅಮೇರಿಕಾ ಖಂಡವಾಸಿಗಳಾದ ಜನರು ಅತ್ಯಂತ ಸರಲಗಳಾದ ಈ ಮೂರು ಅಕ್ಷರಗಳಲ್ಲಿಯೇ ವಿಶ್ವಾಸವನ್ನಿಟ್ಟು ದೊಡ್ಡ ದೊಡ್ಡ ಸಿವ್ಹಿಲ್ ಸರ್ಜನ್ನರಿಗೆ ಬಹಿಷ್ಕಾರವನ್ನು ಹಾಕುತ್ತಿದ್ದರು. ಹೀಗೆ ಮಾಡಿರುವರೋ?

(೯೩-೯೪-ಉ-ವಿ) ಬಸವನ ಮಗನಾದ **ಬಾಲಸಂಗನ** ಅವಸ್ಥೆ ಯೇನಾಯಿತೆಂದು ಪ್ರಶ್ನೆ ಮಾಡಿದಕ್ಕೆ- ಬಸವನು ತೀರಿಕೊಂಡ ನಂತರ ಬಾಲಸಂಗನು ರಾಜ್ಯವಾಳಿದನೆಂದಾಗಲಿ ಮಂತ್ರಿಯಾದನೆಂದಾಗಲಿ ಅಥವಾ ತನ್ನ ತಂದೆಯು ಗ್ರಾಮವಾದ ಬಾಗೇವಾಡಿಗೆ ಹೋಗಿ ಯಾವದಾದರೊಂದು ಉದ್ಯೋಗವನ್ನು ಕೈಕೊಂಡನೆಂದಾಗಲಿ ಹೇಳದೆ ಶ್ರೀರುದ್ರ ಮುನೀಶ್ವರರಂತೆ ಸದ್ಗತಿಯಾಯಿತೆಂದು ಉತ್ತರವನ್ನು ಬರೆದಿರುವದು ಮಂಡತನವಲ್ಲವೆ?

(೯೫-ಉ-ವಿ.) ಇತಿಹಾಸಕಾರರು ಬಸವನು ನದಿಯಲ್ಲಿ ಬಿದ್ದು ಪ್ರಾಣವನ್ನು ಬಿಟ್ಟನೆಂದು ಬರೆದಿರುತ್ತಾರೆ. ಇದು ನಿಜವೇ ಹೇಗೆ! ಎಂದು ಕೇಳಿದ ಪ್ರಶ್ನೆಕ್ಕೆ- ಇತಿಹಾಸಕಾರರ ಅಭಿಪ್ರಾಯವು ತಪ್ಪೆಂದು ಬರೆದಿರುತ್ತಿ; ಅತ್ಯಂತ ಶೋಧಕ ದೃಷ್ಟಿಯುಳ್ಳ ಇತಿಹಾಸಕಾರರ ಅಭಿಪ್ರಾಯಕ್ಕೆ ತಪ್ಪೆಂದು ಭಾವಿಸುವದು ಕೇವಲ ಅನ್ಯಾಯವು! ಯಾವ ಪ್ರಸಿದ್ಧ ಇತಿಹಾಸಕಾರರೂ ಶುದ್ಧವಂಶದ ವೀರಶೈವರಿಗೆ ಶೂದ್ರರೆಂದು ಬರೆದಿರುವದಿಲ್ಲ; ಸಂಕರಜಾತಿಯವರಿಗೆ ಬರೆದಿದ್ದರೂ ಬರೆದಿರಬಹುದು ನಿಷ್ಪಕ್ಷಪಾತಿಗಳಾದ ಇತಿಹಾಸಕಾರರು ಬಸವನು ನದಿಯಲ್ಲಿ ಬಿದ್ದು ಪ್ರಾಣವನ್ನು ಬಿಟ್ಟನೆಂದು ಬರೆದಿರುವದಕ್ಕೆ ಒಪ್ಪಬೇಕಾಗುತ್ತದೆ. ಸಂಸ್ಕೃತ ಬಸವ ಪುರಾಣವನ್ನು ವ್ಯಾಸನು ರಚಿಸಿಲ್ಲವೆಂದು ೩೩ ನೆಯ ವಿಮರ್ಶದಲ್ಲಿ ಸಿದ್ಧ ಮಾಡಿದೆ ನೋಡು. ಅಂದಮೇಲೆ ನೀನು ಬಸವನ ಮರಣದ ವಿಷಯದಲ್ಲಿ ವ್ಯಾಸನ ವಾಕ್ಯವೆಂದು ನಂಬಿ ಸಂಗಮೇಶ್ವರನಲ್ಲಿ ಐಕ್ಯನಾದನೆಂದು ಬರೆದಿರುವದು ಅಸಮಂಜಸವಾಗಲಿಲ್ಲವೇ?

(೯೬-ಉ-ವಿ.) ಬಸವನು ಸಂಗಮೇಶ್ವರನಲ್ಲಿಯೇ ಐಕ್ಯನಾಗಿದ್ದ ಪಕ್ಷದಲ್ಲಿ ಆದಿಯಲ್ಲಿ ಅವನ ಉತ್ಪತ್ತಿಯಾದರೂ ಸಂಗಮೇಶ್ವರನಿಂದಲೇ ಆಗಬೇಕಾಗಿತ್ತು; ಆದರೆ ಅದರಂತೆ ಆಗದೆ ರಕ್ತ ಮಾಂಸಮಯವಾದ ಮಾದಾಂಬಿಕೆಯ ಗರ್ಭದಿಂದೇಕೆ ಆಯಿತೆಂದು ಪ್ರಶ್ನೆ ಮಾಡಿದ್ದಕ್ಕೆ- ಬಸವನು ಸಾಮಾನ್ಯ ಜನರಂತೆ ರಕ್ತರೇತಃ ಸಂಬಂಧದಿಂದ ಉದಯಿಸದೆ ಕೇವಲ ಪರಮಾತ್ಮನ ಇಚ್ಛಾನುಸಾರವಾಗಿ ಭೂತಕಾಯವನ್ನು ತಾಳಿ ಮಾದಾಂಬಿಕೆಯ ಗರ್ಭದಿಂದ ಉದಯಿಸಿದನೆಂದೂ, ಪರಮಾತ್ಮ ಸ್ವರೂಪನಾದ ಸಂಗಮೇಶ್ವರನೇ ಬಸವನ ಉತ್ಪತ್ತಿಗೆ ಕಾರಣನಾದುದರಿಂದ ಆದಿಯಲ್ಲಿ ಬಸವನ ಉತ್ಪತ್ತಿಯು ಸಂಗಮೇಶ್ವರನಿಂದಾಯಿತೆಂದು ಹೇಳಲು ಅವಕಾಶವಿರುತ್ತದೆಂದೂ ಬರೆದಿರುವಿ. ಲೋಕದ

ಲ್ಲಿರತಕ್ಕ ಪ್ರತಿಯೊಂದು ಪ್ರಾಣಿಯು ಉತ್ಪತ್ತಿಗೆ ಪರಮಾತ್ಮನೇ ಮುಖ್ಯ ಕಾರಣನಾಗಿರು ತ್ತಾನೆ. ಅಂದಮೇಲೆ ಪ್ರತಿಯೊಂದು ಪ್ರಾಣಿಯು ರಕ್ತರೇತಸ್ಸುಗಳಿಂದ ಉತ್ಪತ್ತಿಯಾಗದೆ ಕೇವಲ ಪರಮಾತ್ಮನಿಂದುತ್ಪನ್ನವಾಯಿತೆಂದು ಹೇಳಬೇಕಾಯಿತು. ಪ್ರಮಥ ಪುಂಗವರಾದ ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರು ಯುಗ ಯುಗಾಂತರಗಳಲ್ಲಿ ಶ್ರೀಸೋಮನಾಥಾದಿ ಲಿಂಗಗಳಿಂದವತರಿಸಿ ಆ– ಆ– ಲಿಂಗಗಳಲ್ಲಿಯೇ ಅಡಗಿದರೆಂದು ಶಾಸ್ತ್ರಪ್ರಸಿದ್ಧವಿರುತ್ತದೆ. ಇಂಥ ಲೋಕವಿಲಕ್ಷಣವಾದ ಉತ್ಪತ್ತಿಲಯ ಗಳಿಂದ ಕೂಡಿದವರಿಗೆ ನಿಜವಾದ ಪ್ರಮಥರೆಂದು ಹೇಳಬೇಕಲ್ಲದೆ ರಕ್ತರೇತಃ ಸಂಬಂಧದಿಂದುದಯಿಸಿದವರಿಗೆ ಪ್ರಮಥರೆಂದು ಹೇಳಕೂಡದು. ಬಸವ ಪುರಾಣದ ೫ನೆಯ ಅಧ್ಯಾಯದಲ್ಲಿ– "ಶುಕ್ಲಶೋಣಿತ ಸಂಜಸ್ಯಂ ಶರೀರಂ ಭೌತಿಕಂ ಮಮ||" ಎಂದು ಬಸವನು ನನ್ನ ದೇಹವು ರಕ್ತರೇತಸ್ಸುಗಳಿಂದ ಉತ್ಪನ್ನವಾದದ್ದೆಂದು ತಾನೇ ಸ್ಪಷ್ಟವಾಗಿ ಅಂದುಕೊಂಡಿರುವನು. ಹೀಗಿದ್ದಾಗ್ಯೂ ಸಂಗಮೇಶನಿಂದಲೇ ಬಸವನ ಉತ್ಪತ್ತಿಯಾಯಿತೆಂದು ಸಾಧಿಸಲುದ್ಯುಕ್ತನಾದ ನಿನ್ನ ದುರಭಿಮಾನಕ್ಕೆ ಬೆಲೆಯನ್ನು ಕಟ್ಟುವರಾರು? ಈ ಸಂದರ್ಭದಲ್ಲಿ ಈಗಿನ ಆಚಾರ್ಯರ ವಿಷಯವನ್ನೆತ್ತಿಕೊಂಡಿರುವದು ನಿನ್ನ ಕುಂಟಚೇಷ್ಟೆಯೇ ಸರಿ!

(೯೭–೯೮–೯೯–ಉ–ವಿ.) ಬಸವನು ಸಂಗಮೇಶ್ವರನಲ್ಲಿ ಐಕ್ಯನಾದರೆ ಅವನ ಇಬ್ಬರು ಹೆಂಡರು ಎಲ್ಲಿ ಐಕ್ಯರಾದರು? ಎಂದು ಪ್ರಶ್ನೆ ಮಾಡಿದ್ದಕ್ಕೆ– ಅವರು ಸಂಗಮೇಶ್ವರನಲ್ಲಿ ಐಕ್ಯರಾಗದೆ ಸಂಗಮೇಶ್ವರರೂಪವಾದ ಇಷ್ಟಲಿಂಗದಲ್ಲಿ ಐಕ್ಯರಾದರೆಂದು ಹೇಳುವದು ಅಸಂಗತವಾಗದೆಂದು ನಿನ್ನ ಅಭಿಪ್ರಾಯವನ್ನು ಬರದಿರುವಿ. ಬಸವನು ಐಕ್ಯನಾಗಬೇಕಾದರೆ ತನಗೆ ಪೂರ್ವದಲ್ಲಿ ಲಿಂಗಧರಿಸಿದವನೆಂದು ಹೇಳುವ ಕರಚರಣಾದ್ಯಾಕಾರವುಳ್ಳ ಸಂಗಮೇಶ್ವರನಲ್ಲಿ ಐಕ್ಯನಾದನೋ ಅಥವಾ ಕರಚರಣಾದ್ಯಾಕಾರ ರಹಿತನಾಗಿ ಕೇವಲ ಲಿಂಗರೂಪವಾಗಿರುವ ಸಂಗಮೇಶ್ವರನೆಂಬ ಸ್ಥಾವರ ಲಿಂಗದಲ್ಲಿ ಐಕ್ಯನಾದನೋ? ಕರಚರಣಾದ್ಯಾಕಾರವುಳ್ಳ ಸಂಗಮೇಶ್ವರನಲ್ಲಿ ಐಕ್ಯನಾದನೆಂದರೆ ಆ ಐಕ್ಯದ ಸ್ವರೂಪವನ್ನು ತೋರಿಸು. ಸ್ಥಾವರ ಲಿಂಗರೂಪ ಸಂಗಮೇಶ್ವರನಲ್ಲಿ ಐಕ್ಯನಾದನೆಂದರೆ ಇವನ ಹೆಂಡರು ಇಷ್ಟಲಿಂಗದಲ್ಲಿ ಐಕ್ಯರಾದರೆಂದೆನ್ನುವದು ಅಸಮಂಜಸವಾಗಲಿಲ್ಲವೇ? ಯಾಕೆಂದರೆ– ಸ್ಥಾವರಲಿಂಗ ಹಾಗೂ ಇಷ್ಟಲಿಂಗ ಇವೆರಡೂ ಪರಸ್ಪರ ಭಿನ್ನ ಭಿನ್ನಗಳಾಗಿರುವದು ಶಾಸ್ತ್ರ ಪ್ರಸಿದ್ಧವೇ ಇದೆ ಅಷ್ಟೆ! ಅಂದಮೇಲೆ ಈ ದಂಪತಿಗಳ ಸಂಬಂಧವು ಭೂಮ್ಯಾಕಾಶದಷ್ಟು ಅಂತರವಿರುವದೆನ್ನುವದರಲ್ಲೇನು ಸಂದೇಹವು? ಸದ್ಯಃ ಲೋಕದಲ್ಲಿ ಮೃತಪಟ್ಟ ವೀರಶೈವರನ್ನು ಭೂಮಿಯಲ್ಲಿ ಹೂಳುತ್ತಿದ್ದಾಗ್ಯೂ ಜನರು ಅವರಿಗೆ ಲಿಂಗೈಕ್ಯರಾದರೆಂದು ಅನ್ನುವಂತೆಯೂ ಹಾಗೂ ಬರೆಯುವಂತೆಯೂ ಇದ್ದಂತೆ ಇವರ ವಿಷಯದಲ್ಲಿಯಾದರೂ ಹೀಗೆಯೇ ಬರೆದಿರಬಹುದೆಂದು ಸ್ಪಷ್ಟವಾಗುವದಿಲ್ಲವೇ ಹೇಗೆ?

(೧೦೦–ಉ–ವಿ·) ಹಿಂದಿನ ಯಾವತ್ತು ವಿಚಾರಗಳಿಂದ ಬಸವನು ರಾಜ್ಯಸಾಧನ ನಿರತನಾಗಿದ್ದನೆಂಬೂ, ಈ ರಾಜ್ಯಸಾಧನೆಗಾಗಿ ಪವಿತ್ರ ವೀರಶೈವ ಬ್ರಾಹ್ಮಣ ಸಮಾಜವನ್ನು ಕೆಡಿಸಿದನೆಂದೂ, ಇವನಲ್ಲಿ ಅಲೌಕಿಕ ಸಿದ್ಧಿಗಳಾವವೂ ಇದ್ದಿಲ್ಲವೆಂದೂ, ಇವನು ಮಹಿಮಾಶಾಲಿಯಾಗಿದ್ದಿಲ್ಲವೆಂದೂ ಸ್ಪಷ್ಟವಾಗಿ ತಿಳಿದು ಬರುತ್ತದೆ. ಈ ಪ್ರಕಾರವಾಗಿ ರಾಜ್ಯಸಾಧನದಲ್ಲಿ ನಿರತನಾದ ಬಸವನಿಗೆ ಜಗದಾದಿಯಲ್ಲಿ ಕೈಲಾಸದಲ್ಲಿ ಪರಶಿವನ ಮುಖದಿಂದುದಯಿಸಿ ಯುಗ ಯುಗಾಂತರಗಳಲ್ಲಿ ಸರ್ವ ಜನರಿಗೆ ಕಾಣುವಂತೆ ಲಿಂಗದಿಂದವತರಿಸಿ ಪರಮ ಪವಿತ್ರವಾದ ವೀರಶೈವ ಮತವನ್ನು ಸ್ಥಾಪಿಸಿ ಅದೇ ಲಿಂಗದಲ್ಲಿಯೇ ಸರ್ವಜನರು ನೋಡುವಂತೆ ಅಡಗಿದ ಶ್ರೀಜಗದ್ಗುರು ರೇಣುಕಾಚಾರ್ಯರ ದೃಷ್ಟಾಂತವನ್ನು ತೆಗೆದುಕೊಂಡಿರುವದು ಕೇವಲ ದುರಭಿಮಾನವಲ್ಲದೆ ಬೇರೊಂದಿಲ್ಲ! ಬಸವನಿಗೆ ಸಂಗಮೇಶ್ವರ ಲಿಂಗೈಕ್ಯವನ್ನು ಹೇಳುವ ಬಸವ ಪುರಾಣಕ್ಕೂ ಹಾಗೂ ಶ್ರೀರೇಣುಕಾಚಾರ್ಯರಿಗೆ ಸೋಮೇಶ್ವರ ಲಿಂಗೈಕ್ಯವನ್ನು ಹೇಳುವ ಸಿದ್ಧಾಂತ ಶಿಖಾಮಣಿಗೂ ಉಪಮಾನೋಪಮೇಯ ಭಾವವನ್ನು ಹೇಳುವದು ಅತ್ಯಂತ ಅನ್ಯಾಯವು! ಯಾಕಂದರೆ ಸಿದ್ಧಾಂತ ಶಿಖಾಮಣಿ ಯೆಂಬ ಗ್ರಂಥವು ಸಾಮಾನ್ಯವಲ್ಲ! ಶ್ರೀಕರಭಾಷ್ಯ ಕರ್ತನಾದ ಶ್ರೀಪತಿ ಪಂಡಿತನೂ ಹಾಗೂ ಶ್ರೀಕಂಠಭಾಷ್ಯ ಕರ್ತನಾದ ಶ್ರೀಕಂಠ ಶಿವಾಚಾರ್ಯನೂ ತಮ್ಮ ತಮ್ಮ ಭಾಷ್ಯದಲ್ಲಿ ಈ ಗ್ರಂಥವನ್ನು ಪ್ರಮಾಣವನ್ನಾಗಿ ತೆಗೆದುಕೊಂಡಿರುವರು. ಅಲ್ಲದೆ ನಮ್ಮ ಧರ್ಮದ ಅನೇಕ ಜನ ಪ್ರಾಚೀನ ಸಂಸ್ಕೃತಗ್ರಂಥಕಾರರು ಈ ಗ್ರಂಥದ ಪ್ರಮಾಣಗಳನ್ನು ತೆಗೆದುಕೊಳ್ಳದೆ ಇದ್ದವರು ಯಾರೂ ಉಳಿದಿಲ್ಲ; ಇದು ನಿನಗಾದರೂ ಗೊತ್ತಿರಬಹುದು! ಹಾಗೂ ಪರಮತದ ನಿರ್ಣಯಸಿಂಧು– ಶೈವಬ್ರಾಹ್ಮಣೋತ್ಪತ್ತಿ ಮೊದಲಾದ ಗ್ರಂಥಗಳಲ್ಲಿಯೂ ಕೂಡ ಈ ಗ್ರಂಥವನ್ನು ಪ್ರಮಾಣವನ್ನಾಗಿ ಅಂಗೀಕರಿಸಿರುವರು. ಇವರಂತೆ ನಿನ್ನ ಬಸವ ಪುರಾಣವನ್ನು ಯಾವ ಭಾಷ್ಯಕಾರರೇ ಆಗಲಿ ಪ್ರಾಚೀನ ಪ್ರೌಢ ಗ್ರಂಥಕಾರರೇ ಆಗಲಿ ಹಾಗೂ ಪರಮತದವರೇ ಆಗಲೀ ಪ್ರಮಾಣವನ್ನಾಗಿ ಅಂಗೀಕರಿಸಿರುವರೋ? ಈ ಪುರಾಣಕ್ಕೆ ಜಗನ್ಮಾನ್ಯವಾದ ಸಿದ್ಧಾಂತ ಶಿಖಾಮಣಿಯ ಉಪಮಾನವನ್ನು ಕೊಡುವದು ಯೋಗ್ಯವಾಗುವದೋ ಹೇಗೆ? ನೀನೇ ವಿಚಾರಿಸು. ಬಿಜ್ಜಳನು ಮೃತಪಟ್ಟ ನಂತರ ಅವನ ಅಳಿಯನಿಗೂ ಚನ್ನಬಸವಾದಿಗಳಿಗೂ ಘೋರವಾದ ಯುದ್ಧವಾಯಿತೆಂದು ದುರ್ಗದವರ ಪಟ್ಟವಲ್ಲರಿಯಲ್ಲಿ ಬರೆದಿರುವದರಿಂದಲೂ ಹಾಗೂ ನದಿಯಲ್ಲಿ ಬಿದ್ದು ಪ್ರಾಣವನ್ನು ಬಿಟ್ಟನೆಂದು ಆಂಧ್ರವಾಙ್ಮಯ ಚರಿತ್ರ ಕಾರರೇ ಮೊದಲಾದ ಕೆಲವು ಸತ್ಯಶೋಧಕ ಇತಿಹಾಸಕಾರರು ಬರೆದಿರುವದರಿಂದಲೂ ಇವನು ನದಿಗಳ ಸಂಗಮದಲ್ಲಿಯೇ ಬಿದ್ದು ಪ್ರಾಣವನ್ನು ಬಿಟ್ಟಿರಬಹುದೆಂದು ಸ್ಪಷ್ಟವಾಗಿ ತೋರುತ್ತದೆ. ಲೋಕದಲ್ಲಿ ಮೃತರಾದವರಿಗೆ ಶಿವೈಕ್ಯರಾದರೆಂದು ಬರೆಯುವಂತೆ ನದಿಗಳ ಸಂಗಮದಲ್ಲಿ ಬಿದ್ದು ಪ್ರಾಣವನ್ನು ಬಿಟ್ಟ ಇವನಿಗಾದರೂ ಇವನ

ವಿಷಯದಲ್ಲಿ ವಿಶ್ವಾಸವಿಟ್ಟು ಪುರಾಣವನ್ನು ಬರೆದ ಕವಿಯು ಸಂಗಮೇಶ್ವರನಲ್ಲಿ ಐಕ್ಯನಾದನೆಂದು ಬರೆದಿರುವದು ಆಶ್ಚರ್ಯವಲ್ಲ! ಆದರೆ ಬಸವನ ನಿಜವೃತ್ತಾಂತವು ನೀನು ಬರೆಯುವಂತೆ ಇರುವದಿಲ್ಲವೆನ್ನುವದೇ ಸಿದ್ಧಾಂತವು! ಸಿದ್ಧಾಂತವು!! ಸಿದ್ಧಾಂತವು!!!

## ಸತ್ಯಮೇವಜಯತೇ.

(೧೦೧-೧೦೨-ಉ-ವಿ.) ಚನ್ನಬಸವನು ಇವನು ಯಾವನು? ಇವನಿಗೂ ಬಸವನಿಗೂ ಏನಾದರೂ ಸಂಬಂಧವುಂಟೇ ಹೇಗೆ? ಎಂದು ಪ್ರಶ್ನೆ ಮಾಡಿದ್ದಕ್ಕೆ-ಬಸವನಿಗೂ ಚನ್ನಬಸವನಿಗೂ ಲೀಲಾ ಮಾತ್ರ ಕಲ್ಪಿತವಾದ ಆಪ್ತತ್ವ ಸಂಬಂಧ ವಿತ್ತೆಂದು ಬರೆದಿರುವಿ ; ಚನ್ನಬಸವನ ತಾಯಿಯಾದ ನಾಗವ್ವನು ಬಸವನ ಸಹೋದರಿಯಲ್ಲವೇ ? ಅಂದಮೇಲೆ ಈ ಈರ್ವರು ಲೋಕದ ಯಾವತ್ತು ಜನರಂತೆ ಮಾವ- ಅಳಿಯರಾಗಿದ್ದರೆಂದು ಹೇಳದೆ ಲೀಲಾಮಾತ್ರ ಕಲ್ಪಿತವಾದ ಆಪ್ತತ್ವವಿತ್ತೆಂದು ಹೇಳುವದು ಅಸಮಂಜಸವಲ್ಲವೇ ?

(೧೦೩-೧೦೪-ಉ-ವಿ.) ಬಸವನಿಗೆ ತಂದೆ ತಾಯಿಗಳಿದ್ದಂತೆ ಚನ್ನಬಸವನಿಗೆ ತಂದೆ ತಾಯಿಗಳಿದ್ದರೋ ಹೇಗೆ? ಕೇವಲ ತಾಯಿಯೊಬ್ಬಳೇ ಇದ್ದಳೆಂಬ ಪಕ್ಷದಲ್ಲಿ ತಂದೆಯಿಲ್ಲದೆ ಇವನ ಉತ್ಪತ್ತಿಯು ಹೇಗಾಯಿತು ? ಎಂದು ಪ್ರಶ್ನೆ ಮಾಡಿದ್ದಕ್ಕೆ- ಚನ್ನಬಸವನಿಗೆ ತಂದೆಯಿದ್ದಿಲ್ಲವೆಂದೂ, ತಾಯಿಯು ಮಾತ್ರ ಇದ್ದಳೆಂದೂ, ಇವನ ಉತ್ಪತ್ತಿಯು ಪ್ರಸಾದದಿಂದಾಯಿತೆಂದೂ ಬರೆದು ಶಿವಪ್ರಸಾದ ಮಹಿಮೆಯ ವಿಷಯದಲ್ಲಿರುವ ಕೆಲವು ಶ್ಲೋಕಗಳನ್ನು ಉದಾಹರಿಸಿರುವಿ ; ನೀನು ಕೊಟ್ಟಿರುವ ಶ್ಲೋಕಗಳಲ್ಲಿದ್ದ ಶಿವಪ್ರಸಾದದ ಮಹಿಮೆಯನ್ನು ಎಲ್ಲರೂ ಬಲ್ಲರು! ಆದರೆ ಚನ್ನಬಸವನ ಉತ್ಪತ್ತಿಯು ಶಿವಪ್ರಸಾದದಿಂದಾಗಿರದೆ ಡೋಹರ ಕಕ್ಕಯ್ಯನ ಮಿಕ್ಕ ಪ್ರಸಾದದಿಂದಾಯಿತೆಂದು ಅವನ ಚರಿತ್ರದಲ್ಲಿ ಹೇಳಲ್ಪಟ್ಟಿರುತ್ತದೆ. ಅಂತ್ಯಜ ಜಾತಿಯ ಡೋಹರ ಕಕ್ಕಯ್ಯನ ಅನ್ನವು ಶಿವಪ್ರಸಾದವಾಗಲಾರದು. ಅಂದಮೇಲೆ ನೀನು ಉದಾಹರಿಸಿರುವ ಶ್ಲೋಕಗಳನ್ನು ಕಕ್ಕಯ್ಯನ ಅನ್ನಕ್ಕೆ ಸಂಬಂಧ ಮಾಡಿರುವದು ಶುದ್ಧ ಕುಲಘಾತುಕತನವಾಗಿರುವದು. ವೀರಶೈವ ಧರ್ಮಶಾಸ್ತ್ರದಂತೆ ಪ್ರಸಾದವು ಗುರುಲಿಂಗ ಜಂಗಮರಿಂದ ಸಿದ್ಧಿಸುವದೇ ಹೊರತು ಬೇರೊಬ್ಬರಿಂದ ಸಿದ್ಧಿಸುವದಿಲ್ಲ ; ಡೋಹರರವನು ಗುರುಲಿಂಗ ಜಂಗಮ ಸ್ವರೂಪನಾಗಬಲ್ಲನೋ? ಆದ್ದರಿಂದ ಇಂಥ ಅಂತ್ಯಜನ ಅನ್ನದಿಂದ ಚನ್ನಬಸವನು ಹುಟ್ಟಿದನೆನ್ನುವದು ಗಗನ ಕುಸುಮವೇ ಸರಿ! ಅಗಸ್ತ್ಯ ಗೌತಮಾದಿಗಳ ಉತ್ಪತ್ತಿಯು ಸರ್ವಲೋಕ ಮಾನ್ಯಗಳಾದ ಉಪನಿಷದಾದಿ ಪ್ರಾಮಾಣಿಕ ಗ್ರಂಥಗಳಲ್ಲಿ ಘಂಟಾ ಘೋಷವಾಗಿ ಸಾರುವದರಿಂದ ಸರ್ವರೂ ನಿಜವೆಂದೇ ಭಾವಿಸ ಬೇಕಾಗುತ್ತದೆ. ಅದರಂತೆ ಚನ್ನಬಸವನ

ಉತ್ಪತ್ತಿಯು ಸರ್ವಜನ ಸಮ್ಮತಗಳಾದ ಯಾವ ಪ್ರಾಮಾಣಿಕ ಗ್ರಂಥಗಳಲ್ಲಿಯೂ ಕೂಡ ಉಕ್ತವಾಗದಿರುವದರಿಂದಲೂ, ಹಾಗೂ ಇವನ ಉತ್ಪತ್ತಿಯ ವಿಷಯದಲ್ಲಿ ಗ್ರಂಥಗಳು ಭಿನ್ನ ಭಿನ್ನಾಭಿಪ್ರಾಯಗಳನ್ನು ತೋರಿಸುವದರಿಂದಲೂ ಸಂಶಯಾಸ್ಪದವೇ ಸರಿ!

(೧೦೫–ಉ–ವಿ.) ಅಂತ್ಯಜಾತಿಯವನಾದ ಡೋಹರ ಕಕ್ಕಯ್ಯನಿಗೆ ಗುರುಲಿಂಗ ಜಂಗಮ ಸ್ವರೂಪನೆಂದು ಹೇಳುವದು ಧರ್ಮಶಾಸ್ತ್ರವಿರುದ್ಧವೆಂದೂ, ಹೀಗೆ ಹೇಳುವದು ಕುಲಘಾತುಕತನವೆಂತಲೂ, ಇಂಥ ಅಧಮ ಜಾತಿಯವನ ಅನ್ನದಿಂದ ಚನ್ನಬಸವನನು ಹುಟ್ಟುವದು ಕೇವಲ ಗಗನ ಕುಸುಮವೆಂದೂ ಮೇಲಿನ ವಿಮರ್ಶದಲ್ಲಿ ಹೇಳಿದೆ. ನೋಡು!

(೧೦೬–ಉ–ವಿ.) ಡೋಹರನು ಗುರುಲಿಂಗ ಜಂಗಮ ಸ್ವರೂಪಿಯಾಗುವದಿಲ್ಲವಾದ ಕಾರಣ ಬಸವ ಪುರಾಣ– ಚನ್ನಬಸವ ಪುರಾಣ– ಪ್ರಭುಲಿಂಗಲೀಲಾದಿಗಳಿಗೆ ಪರಸ್ಪರ ವಿರೋಧವೇ ಸರಿ!

(೧೦೭–ಉ–ವಿ.) ಜೇ– ಗ್ಯಾರೇಟ್ ಸಾಹೇಬರೆನ್ನುವವರು ನಾಗಾಂಬಿಕೆಯನ್ನು ಬಿಜ್ಜಳನು ಉಪಪತ್ನಿಯನ್ನಾಗಿ ಮಾಡಿಕೊಂಡಿದ್ದನೆಂದು "ಪ್ರಾಕ್ಕಾವ್ಯ ಮಾಲಿಕಾ" ಎಂಬ ಪುಸ್ತಕದಲ್ಲಿ ಒಂದಾನೊಂದು ಅಭಿಪ್ರಾಯವನ್ನು ತೋರಿಸಿರುತ್ತಾರೆ. ಇದು ನಿಜವೇ ಹೇಗೆ? ಎಂದು ಪ್ರಶ್ನ ಮಾಡಿದ್ದಕ್ಕೆ– ಶ್ರೀವೈಷ್ಣವನಾದ ವೆಂಕಟಾಧ್ವರಿಯ ಗ್ರಂಥದ ದೃಷ್ಟಾಂತವನ್ನು ಕೊಟ್ಟಿರುವದು ಅಸಂಗತವು! ಯಾಕಂದರೆ– ಶ್ರೀವೈಷ್ಣವರಿಗೂ ವೀರಶೈವರಿಗೂ ಬಹುಕಾಲದಿಂದ ಪ್ರಚಂಡವಾದ ಮತದ್ವೇಷವಿದೆ. ಈ ವಿಷಯದಲ್ಲಿ ಅನೇಕ ಗ್ರಂಥಗಳೇ ಸಾಕ್ಷಿಗಳಾಗಿವೆ. ಮತದ್ವೇಷದಿಂದ ಅವನು ಏನಾದರೂ ಬರೆದರೂ ಪ್ರಮಾಣವೆನಿಸುವದಿಲ್ಲ! ಆ ವೆಂಕಟಾಧ್ವರಿಯಂತೆ ಗ್ಯಾರೆಟ್ ಸಾಹೇಬರು ಮತದ್ವೇಷಿಗಳಲ್ಲ! ಅವರು ಯಾವ ಮತವನ್ನಾದರೂ ಎಲ್ಲಿಯೂ ನಿಂದಿಸಿಲ್ಲ; ಕನ್ನಡ ಬಸವ ಪುರಾಣವನ್ನು ಬರೆದ ಭೀಮಕವಿಯ ಕವಿತಾ ಚಾತುರ್ಯಕ್ಕೆ ಮೆಚ್ಚಿ ಅವನ ಎಷ್ಟೋ ಪದ್ಯಗಳನ್ನು ತಮ್ಮ ಗ್ರಂಥದಲ್ಲಿ ಉದಾಹರಿಸಿರುವರು. ಇವರು ಮೈಸೂರು ಗವ್ಹರ್ನಮೆಂಟಿನ ಯಾವತ್ತು ವಿದ್ಯಾಖಾತೆಯ ಮೇಲೆ ಡಾಯರೆಕ್ಟರರಾಗಿದ್ದರು. ಈ ಸತ್ಯಶೋಧಕರು ಬಸವನಲ್ಲಿದ್ದ ಯಥಾರ್ಥಗುಣಗಳನ್ನೂ ಅವನ ಸಂಕ್ಷಿಪ್ತ ಚರಿತ್ರವನ್ನೂ ಮಾತ್ರ ಪ್ರಸ್ತಾವನೆಯಲ್ಲಿ ಹೇಳಿರುವರು. ಅದನ್ನು ಅಲ್ಲಗಳೆಯ ಬಹುದೇ? ಇಂಗ್ಲೀಷ ಭಾಷೆಯಲ್ಲಿರುವ ಅವರ ಪ್ರಸ್ತಾವನೆಯನ್ನು ನೋಡು!

(೧೦೮–ಉ–ವಿ.) ಪರಮತದವರು ಚನ್ನಬಸವನ ಉತ್ಪತ್ತಿಯ ವಿಷಯವನ್ನು ಕೇವಲ ಅಸೂಯೆಯಿಂದ ಕಲ್ಪಿಸಿದ್ದಾರೆಂದ ಪಕ್ಷದಲ್ಲಿ ಅವರು ಇಂಥ ವಿಷಯವನ್ನು ಚನ್ನ

ಬಸವನ ಬಗ್ಗೆ ಕಲ್ಪಿಸದೆ ಬಸವನ ಬಗ್ಯೆ ಕಲ್ಪಿಸಬಹುದಾಗಿತ್ತು. ಯಾಕೆಂದರೆ ಪರಪುತ ದವರ ಸಿಟ್ಟು ಬಸವನ ವಿಷಯದಲ್ಲಿರುವದೇ ಹೊರತು ಚನ್ನಬಸವನ ವಿಷಯದಲ್ಲಿರುವ ದಿಲ್ಲವಷ್ಟೆ! ಇದಕ್ಕೆ ಸಮಾಧಾನವೇನು? ಎಂದು ಪ್ರಶ್ನೆ ಮಾಡಿದ್ದಕ್ಕೆ– ಬಸವನಿಗೆ ಚನ್ನ ಬಸವನು ಆಪ್ತನಾದ್ದರಿಂದ ಅವನ ಮೇಲಿನ ಸಿಟ್ಟನಿಂದ ಚನ್ನಬಸವನ ಉತ್ಪತ್ತಿಯ ಬಗ್ಯೆ ಇಂಥ ಕುಕಲ್ಪನವನ್ನು ಮಾಡಿಕೊಂಡು ಬರೆದಿರುವರೆಂದು ಬರೆದಿರುವಿ; ಇಂಥ ಕುಕಲ್ಪನ ವನ್ನು ಬಸವನ ವಿಷಯದಲ್ಲೇಕೆ ಮಾಡಿ ಬರೆಯಲಿಲ್ಲ? ಇರಲಿ; ಆಪ್ತರಿಗಿಂತಲೂ ಗುರು ಗಳಿನ್ನುನವರು ಅಧಿಕರಾಗುವರಷ್ಟೆ! ಅಂದಮೇಲೆ ಬಸವನು ಅತಿಭಕ್ತಿ ಪೂರ್ವಕವಾಗಿ ಗುರು ಬುದ್ಧಿಯಿಂದ ಪೂಜಿಸುತ್ತಿದ್ದ ಡೋಹರಕಕ್ಕಯ್ಯ ಮೊದಲಾದವರ ಉತ್ಪತ್ತಿಯಲ್ಲಿ ಯಾವರೂ ಈ ತರದ ಕುಕಲ್ಪನವನ್ನು ಮಾಡಿಕೊಂಡು ಬರೆಯಬೇಕಾಗಿತ್ತಲ್ಲ? ಅದರಂತೆ ಬರೆದಿರುವರೋ ಹ್ಯಾಗೆ? ಬರೆದಿದ್ದರೆ ತೋರಿಸು. ಅಂದಮೇಲೆ ಚನ್ನಬಸವನ ಉತ್ಪತ್ತಿಯ ಬಗ್ಯೆ ಮಾತ್ರ ಕುಕಲ್ಪನವನ್ನು ಮಾಡಿ ಬರೆದಿರುವರೆಂದರೆ ವಿಚಾರಶಾಲಿಗಳು ಒಪ್ಪುವರೋ? ಅಥವಾ ನಿನ್ನ ಮನಸ್ಸಾದರೂ ಒಪ್ಪುವದೋ? ಶುದ್ಧಾಂತಃಕರಣದಿಂದನೀನೇ ಹೇಳು.

(೧೦೯--ಉ–ವಿ.) ಹಿಂದೂ ಚರಿತ್ರವೆಂಬ ಗ್ರಂಥದಲ್ಲಿ ಬಸವನು ತನ್ನ ತಂ ಗಿಯನ್ನು ಬಿಜ್ಜಳದೊರೆಗೆ ಲಗ್ನ ಮಾಡಿ ಕೊಟ್ಟಿದ್ದನೆಂದು ಬರೆದಿರುತ್ತದೆ. ಇದು ನಿಜವೇ ಹೇಗೆ? ಎಂದು ಪ್ರಶ್ನೆ ಮಾಡಿದ್ದಕ್ಕೆ– ಹಿಂದೂ ಚರಿತ್ರವೆಂಬ ಗ್ರಂಥವು ವೇದಾಗಮಾದಿ ಗಳಂತೆ ಪ್ರಮಾಣಭೂತವಾದುದಲ್ಲ! ಆದಕಾರಣ ಕುತ್ಸಿತ ವಿಷಯದಿಂದ ಕೂಡಿದ ಈ ಗ್ರಂಥವನ್ನು ಒಪ್ಪುವದಿಲ್ಲವೆಂದು ಬರೆದಿರುವಿ. ಹಾಗಾದರೆ ಬಸವನ ವಿಷಯದಲ್ಲಿರತಕ್ಕ ಯಾವತ್ತು ಗ್ರಂಥಗಳು ವೇದಾಗಮಾದಿಗಳಂತೆ ಪ್ರಮಾಣ ಭೂತಗಳಾಗಿರುವವೋ? ಆಗಿ ರುವವೆಂದರೆ ಯಾವ ವೈದಿಕ ಮತದವರಾದರೂ ಆ ಗ್ರಂಥಗಳನ್ನು ಪ್ರಮಾಣಗಳನ್ನಾಗಿ ಉದಾಹರಿಸಿದ್ದಾರೆನ್ನುವದನ್ನು ತೋರಿಸಬಲ್ಲೆಯಾ? ಬಸವನ ಕಾಲದಿಂದೀಚಿನ ಕವಿಗಳು ಅವನ ಮೇಲಿನ ವಿಶ್ವಾಸದಿಂದ ಮನಸ್ಸಿಗೆ ಬಂದಂತೆ ಇಲ್ಲದ್ದೊಂದು ಕಲ್ಪಿಸಿ ಬರೆದಿರುವ ರೆಂದು ಹೇಳಲು ಸಂದೇಹವೇನು? ಆಂಧ್ರವಾಙ್ಮಯ ಚರಿತ್ರಕಾರನು– ಬಸವ ನಿಗೆ ಪದ್ಮಾವತಿಯೆಂಬ ಅತಿ ಸುಂದರಿಯಾದ ತಂಗಿಯಿದ್ದಳೆಂದೂ, ಇವಳನ್ನು ಬಿಜ್ಜ ಳನು ಲಗ್ನವಾಗಿದ್ದನೆಂದೂ, ಅದ್ದರಿಂದಲೇ ಬಿಜ್ಜಳನು ಬಸವನ ಸೂತ್ರಗೊಂಬೆಯಾಗಿ ದ್ದನೆಂದೂ, ಕೆಲವು ದಿವಸಗಳ ಮೇಲೆ ಬಸವನು ಬಿಜ್ಜಳನನ್ನು ಕೊಲ್ಲಿಸಿದನೆಂದೂ, ಅದ್ದ ರಿಂದ ಬಿಜ್ಜಳನ ಮಕ್ಕಳು ಇವನನ್ನು ಕೊಲ್ಲಲಿಕ್ಕೆ ಹೋಗಲಾಗಿ ಸರೋವರದಲ್ಲಿ ಬಿದ್ದು ಪ್ರಾಣವನ್ನು ಬಿಟ್ಟನೆಂದೂ, ಆ ಮೇಲೆ ಚನ್ನಬಸವನು ತನ್ನ ತಾಯಿಯ ತಂಗಿಯಾ ದ ಪದ್ಮಾವತಿಯ ಮಕ್ಕಳಿಗೆ ರಾಜ್ಯಪಟ್ಟವನ್ನು ಕಟ್ಟಿತಾನು ಮಂತ್ರಿಯಾಗಿ ಆಳಿದ ನೆಂದೂ ಸ್ಪಷ್ಟವಾಗಿ ಬರೆದಿರುತ್ತಾನೆ. ತೆಲಗು ಭಾಷೆಯಲ್ಲಿದ್ದ ಆಚರಿತ್ರವನ್ನು ಓದಿ ನೋಡು! ಇದಕ್ಕೂ ಅಸತ್ಯವೆನ್ನುವಿಯೋ?

(೧೧೦–ಉ–ವಿ.) ನಾಗವ್ವನಿಗೆ "ಶಿವಸ್ವಾಮಿ" ಯೆಂಬ ಒಬ್ಬ ಗಂಡನಿದ್ದ ನೆಂಬು ಶಿಂಗಿರಾಜ ಪುರಾಣದಲ್ಲಿ ಬರೆದಿರುತ್ತದೆ. ಇದು ನಿಜವೇ ಹೇಗೆ? ಎಂದು ಪ್ರಶ್ನೆ ಮಾಡಿದ್ದಕ್ಕೆ– ಶಿಂಗಿರಾಜ ಪುರಾಣದಲ್ಲಿ ನಾಗವ್ವನಿಗೆ ಶಿವಸ್ವಾಮಿಯೆಂಬ ಗಂಡನಿದ್ದ ನೆಂದು ಸ್ಪಷ್ಟನಾಗಿ ಬರೆದಿದ್ದರೂ ಈ ಗಂಡನ ವಿಷಯವು ಉಳಿದ ಯಾವ ಗ್ರಂಥಗಳ ಲ್ಲಿಯೂ ಹೇಳಿರುವದಿಲ್ಲವಾದ ಕಾರಣ ಶಿಂಗಿರಾಜನೊಬ್ಬನ ಮಾತನ್ನು ಒಪ್ಪಲಿಕ್ಕಾಗುವ ದಿಲ್ಲವೆಂದು ಬರೆದಿರುವಿ ; ಬಸವನ ಚರಿತ್ರಗಳನ್ನು ಬರೆದ ಯಾವತ್ತು ಕವಿಗಳು ಇತ್ತೀಚಿನ ವರಾಗಿರುತ್ತಾರೆ. ಶಿಂಗಿರಾಜನು ಮಾತ್ರ ಆವನ ಕಾಲದಲ್ಲಿದ್ದನೆಂದು ಅದೇ ಗ್ರಂಥದಿಂದ ತಿಳಿದು ಬರುತ್ತದೆ. ಈ ಕವಿಯು ತನ್ನ ಗ್ರಂಥವಲ್ಲಿ ಬಸವನ ಬಗ್ಗೆ ಅನೇಕ ಉತ್ಕರ್ಷ ವಿಷಯಗಳನ್ನು ಯಾವ ರೀತಿಯಿಂದೇ ಆಗಲಿ ತೋರಿಸಿದ್ದರೂ ನಾಗವ್ವನಿಗೆ ಶಿವಸ್ವಾಮಿ ಯೆಂಬ ಗಂಡನಿದ್ದನೆಂದು ಸುಮ್ಮ ಸುಮ್ಮನೆ ಯಾಕೆ ಬರೆದಾನು? ನೀನೇ ವಿಚಾರಿಸು!

(೧೧೧–೧೧೨–ಉ–ವಿ.) ನಾಗಮ್ಮನಿಗೆ ಗಂಡನಿದ್ದನೆಂದರೆ ಬೇರೆ ಬೇರೆ ಜನರ ಪ್ರಸಾದವನ್ನು ಸ್ವೀಕರಿಸಿ ಹಡೆದಳೆಂದು ಸಾರುವ ಬಸವ ಪುರಾಣಾದಿಗಳ ಗತಿಯೇನು? ಗಂಡ ನಿದ್ದಿಲ್ಲವೆಂದರೆ ಗಂಡನಿದ್ದನೆಂದು ಸಾರುವ ಶಿಂಗಿರಾಜ ಪುರಾಣದ ಗತಿಯೇನೆಂದು ಪ್ರಶ್ನೆ ಮಾಡಿದ್ದಕ್ಕೆ– ಸುದಕ್ಷಿಣಾ ದೇವಿಯು ಹಾಗೂ ಅಮೃತವತಿ ದೇವಿಯರು ಮಹಾತ್ಮರ ಅನುಗ್ರಹದಿಂದ ಮಕ್ಕಳನ್ನು ಹಡೆದಂತೆ ನಾಗಮ್ಮನಾದರೂ ಮಹಾತ್ಮರ ಅನು ಗ್ರಹದಿಂದ ಹಡೆದಿರುತ್ತಾಳೆ. ಇದಕ್ಕೆ ಪತಿಯೇತಕ್ಕೆ ಬೇಕೆಂದು ಬರೆದಿರುವಿ ; ಅಪ್ಪಾ– ಈ ವಿಷಯದಲ್ಲಿ ನೀನು ಕೊಟ್ಟಿರುವ ದೃಷ್ಟಾಂತಗಳು ಕೇವಲ ವಿಷಮಗಳಾಗುತ್ತವೆ. ಯಾಕೆಂದರೆ ಸ್ತ್ರೀಯರ ಗರ್ಭಧಾರಣಕ್ಕೆ ಪತಿಯೇ ಮುಖ್ಯ ಕಾರಣನಾಗುತ್ತಾನೆ ; ಮಹಾ ತ್ಮರ ಅನುಗ್ರಹವು ಸಾಧಾರಣ ಕಾರಣವಾಗುತ್ತದೆ. ಅಮೃತವತಿ ದೇವಿಯೇ ಆಗಲಿ ಹಾಗೂ ಸುದಕ್ಷಿಣಾ ದೇವಿಯೇ ಆಗಲಿ ಅವರು ಪತಿ ಸಂಯೋಗವಿಲ್ಲದೆ ಹಡೆದಿರುವದಿಲ್ಲ ; ಅವರಿಗೆ ಸತ್ಯೇಂದ್ರಚೋಳದಿಲೀಪರೆಂಬ ಪತಿಗಳು ಇದ್ದೇ ಇದ್ದರು, ಜಗತ್ತಿನ ಸಮಸ್ತ ಕಾರ್ಯಕ್ಕೆ ಶಿವಾನುಗ್ರಹವು ಬೇಕೇ ಬೇಕು. ಸಧ್ಯಃ ಲೋಕದಲ್ಲಿ ಅನಂತ ಸ್ತ್ರೀಯರು ದೇವತಾದಿಗಳಲ್ಲಿ ವಿಶ್ವಾಸವನ್ನಿಟ್ಟು ವ್ರತಗಳನ್ನಾಚರಿಸಿ ಆ ದೇವತಾದಿ ಗಳ ಅನುಗ್ರಹದಿಂದಲೇ ಸಂತತಿಯನ್ನು ಪಡೆದೆವೆಂದು ಹೇಳುತ್ತಾರೆ. ಹೀಗೆ ಹೇಳಿದ ಮಾತ್ರಕ್ಕೆ ಅವರಿಗೆ ಪತಿಸಂಯೋಗ ವಾಗಿದ್ದಿಲ್ಲವೆಂದು ಹೇಳಲಿಕ್ಕಾದೀತೇ? ಇವರಂತೆಯೇ ಅಮೃತವತಿದೇವಿ ಸುದಕ್ಷಿಣಾದೇವಿಯರ ಉದರದಿಂದ ರಾಜಶೇಖರನ ಹಾಗೂ ರಘು ರಾಜನ ಉತ್ಪತ್ತಿ ಯಿರುವದೆಂದು ತಿಳಿ! ಈ ವಿಚಾರದ ಮೇಲಿಂದ ನಾಗಮ್ಮನು ಪತಿ ಸಂಯೋಗವಿಲ್ಲದೆ ಹಡೆದಳೆನ್ನುವದು ಆಶ್ಚರ್ಯವಲ್ಲವೇ?

(೧೧೩–ಉ–ವಿ.) ಚನ್ನಬಸವನಿಗೆ ಹುಟ್ಟಿದ ಕೂಡಲೆ ಲಿಂಗವನ್ನು ಯಾರು ಧರಿ

ಸಿದರು ? ಎಂದು ಪ್ರಶ್ನೆ ಮಾಡಿದಕ್ಕೆ– ಇವನಿಗೆ ಯಾರೂ ಲಿಂಗವನ್ನು ಧರಿಸಿಲ್ಲವೆಂದೂ ಇವನು ಲಿಂಗಧಾರಣ ಸಹಿತನಾಗಿಯೇ ಹುಟ್ಟಿದನೆಂದೂ ಬರೆದಿರುವಿ. ಬಸವನು ಲೋಕದ ಜನರಿಗೆ ಲಿಂಗಧಾರಣದ ಮಾರ್ಗವನ್ನು ತೋರಿಸುವದಕ್ಕಾಗಿ ಸಂಗಮೇಶ್ವರನೆಂಬ ಗುರುವಿನಿಂದ ಹುಟ್ಟಿದ ಮೇಲೆ ಲಿಂಗವನ್ನು ಧರಿಸಿಕೊಂಡನೆಂದು ೧೫ ನೆಯ ಉತ್ತರದಲ್ಲಿ ಬರೆದಿರುವಿಯಷ್ಟೆ ! ನಿನ್ನ ಅಭಿಪ್ರಾಯದಂತೆ ಬಸವನಂತೆ ಧರ್ಮ ಮಾರ್ಗದರ್ಶಕನಾದ ಈ ಚನ್ನಬಸವನಾದರೂ ಹುಟ್ಟಿದ ಕೂಡಲೆ ಲಿಂಗವನ್ನು ಧರಿಸಿಕೊಳ್ಳದೆ ಲಿಂಗಧಾರಣ ಸಹಿತನಾಗಿಯೇ ಹುಟ್ಟಿದನೆಂದು ಹೇಳಿದ ಮೇಲೆ ಇವನು ಬಸವನಂತೆ ಲಿಂಗಧಾರಣ ಮಾರ್ಗದರ್ಶಕನಾಗಲಿಲ್ಲವೆಂದು ಹೇಳಿದಂತಾಗಲಿಲ್ಲವೇ ?

(೧೧೧೪–೧೧೫–ಉ–ವಿ.) ಚನ್ನಬಸವನಿಗೆ ೮ ನೆಯ ವರ್ಷದಲ್ಲಿ ಶಿವದೀಕ್ಷೆಯಾಗಿತ್ತೋ ಇಲ್ಲವೋ? ಆಗಿತ್ತೆಂದರೆ ಇವನಿಗೆ ದೀಕ್ಷೆಯನ್ನು ಯಾರು ಮಾಡಿದರು? ಎಂದು ಪ್ರಶ್ನೆ ಮಾಡಿದ್ದಕ್ಕೆ– ಇವನಿಗೆ ೮ ನೆಯ ವರ್ಷದಲ್ಲಿ ದೀಕ್ಷೆಯಾಗಿದ್ದಿಲ್ಲವೆಂದೂ, ಮೊದಲೇ ಪರಮಾತ್ಮನಿಂದ ನಿರಧಿಕರಣ ದೀಕ್ಷೆಯಾಗಿತ್ತೆಂದೂ ಬರೆದಿರುವಿ. ಸಂಸ್ಕೃತ ಬಸವ ಪುರಾಣದ ೧೧ ನೆಯ ಅಧ್ಯಾಯದಲ್ಲಿ– "ತಸ್ಯಾಸ್ತು ತನಯೋ ಜಜ್ಞೇ ಶ್ರೀಚನ್ನಬಸವೇಶ್ವರಃ | ಗುರುಣಾ ಬಸವೇಶೇನ ಕೃತದೀಕ್ಷೋ ಮುದಾನ್ವಿತಃ ||" ಈ ಪ್ರಕಾರವಾಗಿ ಚನ್ನಬಸವನಿಗೆ ಬಸವನೇ ಗುರುವಾಗಿ ದೀಕ್ಷೆಯನ್ನು ಮಾಡಿದನೆಂದು ಬರೆದಿರುತ್ತದೆ. ಚನ್ನಾಗಿ ದಿಟ್ಟಿಸಿ ನೋಡು ! ಅಂದಮೇಲೆ ಚನ್ನಬಸವನಿಗೆ ಪರಮಾತ್ಮನಿಂದ ನಿರಧಿಕರಣ ದೀಕ್ಷೆಯಾಗಿತ್ತೆನ್ನುವದು ಕೇವಲ ದುರಭಿಮಾನವಲ್ಲವೇ ?

(೧೧೬–ಉ–ವಿ.) ಚನ್ನಬಸವನಿಗೆ ಬಸವನು ದೀಕ್ಷೆಯನ್ನು ಮಾಡಿದ್ದಿಲ್ಲವೆಂದು ಬರೆದಿರುವಿ. ಮೇಲಿನ ವಿಮರ್ಶವನ್ನು ನೋಡಿ ಭ್ರಾಂತಿಯಿಂದ ದೂರನಾಗು. ಹಾಗೂ ಪ್ರಭುಲಿಂಗಲೀಲೆಯ ೯ ನೆಯ ಅಧ್ಯಾಯದಲ್ಲಿ–"ಬಸವೇಶಾದೇವ ತಚ್ಛಿಷ್ಯಶ್ಚನ್ನೋಭೂದ್ದಂಡನಾಯಕಃ ||" ಈ ಪ್ರಕಾರವಾಗಿ ಚನ್ನಬಸವನು ಬಸವನ ಶಿಷ್ಯನಾಗಿದ್ದನೆಂದು ಸ್ಪಷ್ಟವಾಗಿ ಬರೆದಿರುತ್ತದೆ. ಇದನ್ನಾದರೂ ಕಣ್ತೆರೆದು ನೋಡು !

(೧೧೭–ಉ–ವಿ.) ಬಸವನು ಶುದ್ಧ ಸಾಂಪ್ರದಾಯದ ಗುರುವಂಶೀಯರಿಗೂ ಕೂಡ ಗುರುಸ್ವರೂಪನಾಗಿರುವನೆಂದೂ, ಇವನು ನಂದೀಶ್ವರನ ಅವತಾರಿಯಾದ್ದರಿಂದ ಇವನಿಗೆ ಶಿವದೀಕ್ಷಾದಿಗಳನ್ನು ಮಾಡುವ ಅಧಿಕಾರವು ಇರುತ್ತದೆಂದೂ ಬರೆದಿರುವಿ; ಅಯ್ಯೋ ಪಾಪಿಯೇ–ಡೋರ–ಮಾದಿಗ ಮೊದಲಾದವರನ್ನು ಗುರುಗಳನ್ನಾಗಿ ಮಾಡಿಕೊಂಡ ಕುಲಘಾತಕನಾದ ಬಸವನು ಸದ್ವಂಶದ ಗುರುಸ್ಥಲದವರಿಗೆ ಗುರುವಾಗುವನೋ ? ಸದ್ವಂಶದವರಿಗೆ ಗುರುವಾಗುವದು ಅವನ ಶಕ್ತಿಯೆ ? ಸಂಕರಜಾತಿಯವ

ರಿಗೂ ಬಿಡಾಡಿ ಜಂಗಮರಿಗೂ ಕಪ್ಪರದ ಅಯ್ಯಗಳಿಗೂ ಗುರುವಾದರೂ ಆಗಬಹುದು! ಇವನು ನಂದೀಶನ ಅವತಾರಿಯಲ್ಲವೆಂದೂ ರಾಜ್ಯದಾಶೆಗಾಗಿ ಕುಲಗೆಡಿಸಿದ ಒಬ್ಬ ನರನೆಂದೂ ಹಿಂದಿನ ಅನೇಕ ವಿಮರ್ಶೆಗಳಲ್ಲಿ ಸಿದ್ಧವಾಗಿದೆ. ಇಂಥ ಜಾತಿ ಸಂಕರ ಕಾರಕನು ಅಗಸ-ಕ್ಷೌರಿಕ ಮಾದಿಗ ಮೊದಲಾದವರಿಗೆ ತನ್ನ ಸಂಕರದೀಕ್ಷೆಯನ್ನು ಕೊಡಲು ಸಮರ್ಥನಾದಾನೇ ಹೊರತು ಶುದ್ಧ ಸಾಂಪ್ರದಾಯದವರಿಗೆ ಶಾಸ್ತ್ರೀಯವಾದ ದೀಕ್ಷೆಯನ್ನು ಕೊಡಲು ಸಮರ್ಥನಾದಾನೇ ಮಂದಮತಿಯೇ?

(೧೧೮-ಉ-ವಿ.) ಬಸವನಿಗೆ ದೀಕ್ಷಾಧಿಕಾರವಿರುವದೆನ್ನುವದನ್ನು ಸಯುಕ್ತಿಕವಾಗಿ ಸೂಚಿಸಿರುತ್ತೇವೆಂದು ಬರೆದಿರುವಿ. ನಿನ್ನ ಯುಕ್ತಿಯನ್ನು ಯಾರು ಕೇಳಿದ್ದರು? ಯುಕ್ತಿಯಿಂದ ಸಾಧಿಸ ಹೋದರೆ ಬಸವನಿಗೇಕೆ? ಒಬ್ಬ ಚಂಡಾಲನಿಗೂ ಕೂಡ ದೀಕ್ಷಾಧಿಕಾರವಿರುವದೆಂದು ಸಿದ್ಧ ಮಾಡ ಬಹುದು! ಯುಕ್ತಿಯಿಂದ ಪ್ರಯೋಜನವಿಲ್ಲ; ಅಸ್ತು! ಚನ್ನಬಸವನು ಬಸವನ ಕಡೆಯಿಂದ ಲಿಂಗವನ್ನು ಧರಿಸಿಕೊಂಡ ಕಾರಣ ಇವನಿಗೆ ಶುದ್ಧ ವೀರಶೈವನೆಂದು ಹೇಳಲಿಕ್ಕೆ ಬರುವದಿಲ್ಲ; ಈ ಸಂದರ್ಭದಲ್ಲಿ ಶ್ರೀಮತ್ಪಂಚಾಚಾರ್ಯರ ದೃಷ್ಟಾಂತವನ್ನು ತೆಗೆದು ಕೊಂಡಿರುವದು ಕೇವಲ ತುಚ್ಛವು!

(೧೧೯-ಉ-ವಿ.) ಗುರುವು ಸಂಪ್ರದಾಯ ಶುದ್ಧರಾದ ಸ್ವಗೋತ್ರ ಯುಕ್ತ ಶಿಷ್ಯರಿಗೆ ದೀಕ್ಷೆಯನ್ನು ಮಾಡಬೇಕಾದರೆ ತನ್ನ ಗೋತ್ರಾಧಿಪತಿಗಳಾದ ಪೂರ್ವಾಚಾರ್ಯರ ಕಲಶಗಳನ್ನು ಮಧ್ಯದಲ್ಲಿಟ್ಟು ತನ್ನ ಶಾಖಾನುಸಾರವಾಗಿ ದೀಕ್ಷೆಯನ್ನು ಮಾಡಬೇಕೆಂದು **ಸುಪ್ರಬೋಧಾಗಮವು** ಸಿಂಹಗರ್ಜನವನ್ನು ಮಾಡುತ್ತಿದ್ದಾಗ್ಯೂ ಈ ವಿಷಯವು ನಿನ್ನ ಕರ್ಣಗಳನ್ನು ಭೇದಿಸದೆ ಇರುವದು ಆಶ್ಚರ್ಯವೇ ಸರಿ! ಗುರುಗಳು ತಮ್ಮ ಗೋತ್ರ ಶೂನ್ಯರಾದ ಆಗಂತುಕರಿಗೆ ಹ್ಯಾಗೆ ಲಿಂಗಧಾರಣವನ್ನು ಮಾಡುವರೆಂದು ಕೇಳಿರುವಿ; ಸಂಪ್ರದಾಯ ಶುದ್ಧರಾದ ವೀರಶೈವರಿಗೆ **ಸ್ವಗೋತ್ರ-ಸ್ವಶಾಖಾನುಸಾರ**ವಾಗಿ ಕ್ರಮವಾದ ದೀಕ್ಷೆಯಾಗುವಂತೆಯೂ ಶಾಖಾನುಸಾರವಾಗಿ ಮಂತ್ರಗಳನ್ನು ಉಪದೇಶಿಸುವಂತೆಯೂ ಆಗಂತುಕರಿಗೆ ಮಾಡಲಿಕ್ಕೆ ಬರುವದಿಲ್ಲ. ಆಗಂತುಕರು ಲಿಂಗಧಾರಣ ಸಂಪನ್ನರಾದ ಮೇಲೆಯೂ ಅವರಿಗೆ **ವೀರ-ನಂದ್ಯಾದಿ ಗೋತ್ರಗಳು** ಸಂಬಂಧಿಸುವದಿಲ್ಲೆಂಬದು ತಿಳಿ! ಆಗಂತುಕರ ಲಿಂಗಧಾರಣ ವಿಷಯದ ದೃಷ್ಟಾಂತವನ್ನು ಚನ್ನಬಸವನ ದೀಕ್ಷಾ ಸಂಬಂಧವಲ್ಲಿ ತೆಗೆದುಕೊಂಡ ಮೇಲೆ ಚನ್ನಬಸವನಾದರೂ **ಆಗಂತುಕ**ನೆಂದು ಹೇಳಿದಂತಾಯಿತಲ್ಲವೇ? ಆಗಂತುಕನೆಂದರೆ ಬಸವನು ದೀಕ್ಷೆಯನ್ನು ಮಾಡಿದ್ದೇ ಸಂತೋಷವು! ಚನ್ನಬಸವನು ಆಗಂತುಕ ನಾಗಿದ್ದಿಲ್ಲವೆಂದರೆ ಅವನಿಗೆ ಬಸವನು ಕೊಟ್ಟ ದೀಕ್ಷೆಯು ಅಕ್ರಮವಾದದ್ದು!

(೧೨೦-ಉ-ವಿ.) ದೀಕ್ಷಾ ಗುರುವು ಶಿಷ್ಯನ ದೀಕ್ಷಾಗುರುವಾಗುವದಿ

ಲ್ಲವೆಂದು ಬರೆದಿರುವಿಯಷ್ಟೆ! ಸಿದ್ಧಾಂತ ಶಿಖಾಮಣಿಯನ್ನು ಸ್ವಲ್ಪು ಕಣ್ತೆರೆದು ನೋಡು! "ದೀಕ್ಷಾಗುರುರಸೌ ಶಿಕ್ಷಾಹೇತುಃ ಶಿಷ್ಯಸ್ಯ ಬೋಧಕಃ। ಪ್ರಶ್ನೋತ್ತರ ಪ್ರವಕ್ತಾಚ ಶಿಕ್ಷಾಗುರುರಿತೀರ್ಯತೇ ॥ ಉಪದೇಷ್ಟೋಪದೇಶಾನಾಂ ಸಂಶಯಚ್ಛೇದಕಾರಕಃ। ಸಮ್ಯಗ್‌ಜ್ಞಾನಪ್ರದಃ ಸಾಕ್ಷಾದೇಷಜ್ಞಾನಗುರುಃಸ್ಮೃತಃ ॥" ಈ ಪ್ರಕಾರವಾಗಿ ದೀಕ್ಷಾ ಗುರುವೇ ಶಿಕ್ಷಾಗುರು ಮೋಕ್ಷಗುರುವಾಗುತ್ತಾನೆಂದು ಸ್ಪಷ್ಟವಾಗಿ ಹೇಳಲ್ಪಟ್ಟಿದೆ. ದೀಕ್ಷಾಗುರುವೇ ಮೋಕ್ಷಗುರುವಾಗುತ್ತಾನೆಂದ ಮೇಲೆ ಚನ್ನಬಸವನಿಗೆ ದೀಕ್ಷೆಯನ್ನು ಮಾಡಿ ದೀಕ್ಷಾಗುರುವೆನಿಸಿಕೊಂಡ ಬಸವನು ಅವನಿಗೆ ತಾನು ಮೋಕ್ಷ ಗುರುವಾಗದೆ ಪುನಃ ಚನ್ನಬಸವನ ಕಡೆಯಿಂದ ತಾನೇ ಮೋಕ್ಷತತ್ವವನ್ನು ತಿಳಿದುಕೊಂಡನೆನ್ನುವದು ಅತ್ಯಂತ ವಿರೋಧವಲ್ಲವೇ ಹೇಗೆ? ನೀನೆ ವಿಚಾರಿಸು!

(೧೨೧–ಉ–ವಿ) ಬಸವನು ಚನ್ನಬಸವನ ಕಡೆಯಿಂದ ಮೋಕ್ಷತತ್ವವನ್ನು ತಿಳಿದುಕೊಳ್ಳಬೇಕಾದರೆ ಮೋಕ್ಷತತ್ವವು ಗುರುಮುಖದಿಂದ ತಿಳಿಯತಕ್ಕದ್ದೆನ್ನುವದನ್ನು ತಾನು ಆಚರಿಸಿ ಲೋಕದವರಿಗೆ ತಿಳುಹಿಸಬೇಕೆಂಬ ಸಮುದ್ದೇಶದಿಂದಲೇ ತಿಳುಹಿಸಿಕೊಂಡನೆಂದು ಬರೆದಿರುವಿ. ಹಾಗಾದರೆ ಲೋಕದವರಿಗೆ ದೀಕ್ಷೆಯ ಸ್ವರೂಪವನ್ನು ತಿಳುಹಿಸಬೇಕೆಂಬ ಸದುದ್ದೇಶದಿಂದ ಈ ಬಸವನು ಲ ನೆಯ ವರ್ಷದಲ್ಲಿ ತಾನು ದೀಕ್ಷೆಯನ್ನೇಕೆ ಮಾಡಿಸಿಕೊಳ್ಳಲಿಲ್ಲ? ಇದು ಇವನ ಸದುದ್ದೇಶವೋ ಅಥವಾ ದುರುದ್ದೇಶವೋ? ಬಸವನು ಆದಿಯಲ್ಲಿ ಮೋಕ್ಷಜ್ಞಾನ ಶೂನ್ಯನಾಗಿದ್ದನೆಂದ ಮೇಲೆ ಚನ್ನಬಸವನಿಗೆ ದೀಕ್ಷೆಯನ್ನು ಹೇಗೆ ಮಾಡಿದನು?

(೧೨೨–ಉ–ವಿ.) ಬಸವನು ಚನ್ನಬಸವನಿಗೆ ದೀಕ್ಷೆಯನ್ನು ಕೊಟ್ಟ ಕಾರಣದಿಂದಲೂ, ಚನ್ನಬಸವನು ಬಸವನಿಗೆ ಮೋಕ್ಷಸ್ವರೂಪವನ್ನು ತಿಳುಹಿಸಿದ ಕಾರಣದಿಂದಲೂ, ಈ ಈರ್ವರು ತಮ್ಮತಮ್ಮೊಳಗೆ ಗುರುತ್ವವನ್ನು ಕಲ್ಪಿಸಿಕೊಂಡು ವರ್ತಿಸಿದರೆಂದು ಚಿಕ್ಕ ಬಾಲಕರಿಗೂ ಕೂಡ ಗೊತ್ತಾಗುತ್ತದೆ. "ನಂದೀಶ್ವರನ ಹಾಗೂ ಷಣ್ಮುಖನ ಅವತಾರಿಗಳಾದ ಬಸವ ಚನ್ನಬಸವರಿಗೆ ದೀಕ್ಷೆಯನ್ನು ಮಾಡುವದಕ್ಕೆ ಸದ್ವಂಶೀಯರಾದ ಗುರುಗಳಿಗೆ ಅಧಿಕಾರವೆಲ್ಲಿರುವದು?" ಎಂದು ಬರೆದಿರುವಿಯಷ್ಟೆ! ಅಹೋ! ಈ ಮಹನೀಯರ ದೀಕ್ಷೆಗೆ ಸದ್ವಂಶೀಯ ಗುರುಗಳು ಅಧಿಕಾರಿಗಳಾದಾರೇ? ಇವರಿಗೆ ಡೋಹರ ಕಕ್ಕಯ್ಯನವರೂ ಮಾದಿಗ ಹರಳಯ್ಯನವರೂ ಮೊದಲಾದ ಮಹಾ ಶಿವ ಶರಣರು ಅಧಿಕಾರಿಗಳಾಗಿಯೇ ಇದ್ದಾರೆ. ಸಂತೋಷ! ಸಂತೋಷ!!

(೧೨೩–ಉ–ವಿ.) ಚನ್ನಬಸವನು ಷಣ್ಮುಖನಾಗಿದ್ದ ಪಕ್ಷದಲ್ಲಿ ಅವನಿಗೆ ಷಣ್ಮುಖನೆಂದಾಗಲಿ ಅಥವಾ ಅಸಂಖ್ಯಾತ ನಾಮಗಳುಳ್ಳ ಅವನ ಬೇರೊಂದು ನಾಮವನ್ನಾಗಲಿ ಇಡದೆ ಚನ್ನಬಸವನೆಂದೇಕೆ ... ಮಾಡಿದ್ದಕ್ಕೆ– ವಿಷ್ಣು

ವಿನ ಅವತಾರಿಗಳಾದ ರಾಮಾದಿಗಳ ದೃಷ್ಟಾಂತವನ್ನು ಕೊಟ್ಟಿರುವಿ. ದಡ್ಡನೇ-ವಿಷ್ಣು ಸಹಸ್ರನಾಮಾವಲಿಯಲ್ಲಿ- ಅವನ ಅವತಾರಿಗಳಾದ ರಾಮಾದಿಗಳ ಹೆಸರುಗಳು ಬಂದಿರುವವು. ಹಾಗೂ ಪಾರಮೇಶ್ವರಾಗಮದ ೧ ನೆಯ ಪಟಲದಲ್ಲಿ ವೈಷ್ಣವ ಭೇದದೊಳಗೆ ರಾಮ- ಕೃಷ್ಣ- ನೃಸಿಂಹಾದಿಗಳ ಹೆಸರುಗಳು ಬಂದಿರುವವು. ಆದ್ದರಿಂದ ಈ ಅವತಾರಿಗಳ ಹೆಸರುಗಳು ವಿಷ್ಣುವಿನವೇ ಇರುತ್ತವೆನ್ನುವದರಲ್ಲಿ ಸಂದೇಹವಿಲ್ಲ! ಅದರಂತೆ ಚನ್ನಬಸವನೆಂಬ ಹೆಸರು ಸ್ಕಂದನ ನಾಮಾವಲಿಯಲ್ಲಿಯಾಗಲಿ ಅಥವಾ ಯಾವದಾದರೊಂದಾಗಮದ ಶೈವಭೇದ ಪ್ರಕರಣದಲ್ಲಾಗಲಿ ಬಂದಿರುವದೇ ಹೇಗೆ? ಬಂದಿದ್ದರೆ ತೋರಿಸು. ವ್ಯಾಸನು ತನ್ನ ಪುರಾಣಗಳಲ್ಲಿ ವಿಷ್ಣುವಿನ ಅವತಾರಿಗಳಾದ ರಾಮಾದಿಗಳ ಹೆಸರುಗಳನ್ನು ತೆಗೆದುಕೊಂಡಂತೆಯೂ ವಾಲ್ಮೀಕಿಗೆ ಬ್ರಹ್ಮನೆಂದು ಹೇಳಿದಂತೆಯೂ ಷಣ್ಮುಖನ ಅವತಾರಿಯೆಂದು ಹೇಳುವ ನಿನ್ನ ಚನ್ನಬಸವನ ಹೆಸರನ್ನು ತೆಗೆದುಕೊಂಡಿರುವನೋ! ಇದ್ದರೆ ತೋರಿಸು! ಇವನ ಉತ್ಪತ್ತಿಯ ವಿಷಯದಲ್ಲಿಯೇ ಅನೇಕ ಸಂಶಯಗಳುಂಟಾಗುವ ಕಾರಣ ಇವನು ಷಣ್ಮುಖನ ಅವತಾರಿಯೆಂದೂ "ಚನ್ನಬಸವ" ಎಂಬ ಹೆಸರು ಷಣ್ಮುಖನ ನಾಮವೆಂದೂ ಹೇಳುವದು ದುರಭಿಮಾನವಲ್ಲವೇ?

(೧೨೪-ಉ-ವಿ.) ಮೇಲಿನ ವಿಮರ್ಶದಿಂದ ಚನ್ನಬಸವನು ಷಣ್ಮುಖನ ಅವತಾರಿಯಲ್ಲವೆಂದುಸ್ಪಷ್ಟವಾಗುತ್ತದೆ. ಆದ್ದರಿಂದ ಇವನ ನಾಮವು ಷಣ್ಮುಖನ ಅವತಾರಕ್ಕಿರುವದೆಂದು ಹೇಳುವದು ಅನುಚಿತವು!

(೧೨೫-ಉ-ವಿ.) "ಚನ್ನ" ಎಂಬ ವಿಶೇಷಣವು ಪ್ರಸಿದ್ಧ ಕನ್ನಡ ಭಾಷೆಯದಿದ್ದು ಸೌಂದರ್ಯಾರ್ಥವನ್ನು ತೋರಿಸುವದು. ಈ ವಿಷಯದಲ್ಲಿ ಕರ್ನಾಟಕಭಾಷಾಕರ ಎಂಬ ನಿಘಂಟಿನ ೮೯ ನೆಯ ಪುಟವನ್ನು ನೋಡಿ ಭ್ರಾಂತಿ ಶೂನ್ಯನಾಗು. ಹೀಗಿದ್ದಾಗ್ಯೂ ಇಂಥ ಕನ್ನಡ ಶಬ್ದವನ್ನು ಸಂಸ್ಕೃತವೆಂದು ನೀನು ಸಾಧಿಸಿರುವದು "ಅಗಸ-ಕುರುಬ" ಮೊದಲಾದ ಶಬ್ದಗಳನ್ನು ಸಾಧಿಸಿದಂತಾಗುವದು ೩೭ ನೆಯ ವಿಮರ್ಶವನ್ನು ನೋಡು.

(೧೨೬-ಉ-ವಿ.) "ಬಸವ- ಚನ್ನಬಸವ" ಎಂಬೀ ಕನ್ನಡ ಶಬ್ದಗಳು ಅನುಕ್ರಮವಾಗಿ "ಎತ್ತು- ಸುಂದರವಾದ ಎತ್ತು" ಎಂದು ಅರ್ಥವನ್ನು ಕೊಡುವದರಿಂದಲೂ, ಆ ಎತ್ತಿನ ಹೆಸರನ್ನೇ ಇವರಿಗೆ ಅವರವರ ತಂದೆತಾಯಿಗಳಿಟ್ಟಿರುವದರಿಂದಲೂ, ಇವರು ನಂದೀಶ್ವರಹಾಗೂ ಷಣ್ಮುಖನ ಅವತಾರಿಗಳಲ್ಲವೆಂದು ಹಿಂದಿನ ಯಾವತ್ತು ವಿಮರ್ಶಗಳಿಂದ ಸ್ಪಷ್ಟವಾಗಿರುವದರಿಂದಲೂ ಇವರು ಅವತಾರಿಗಳಲ್ಲವೆನ್ನುವದೇ ಸಿದ್ಧವು!

(೧೨೭-ಉ-ವಿ.) ಇವನಿಗೆ ಕೆಲವು ಗ್ರಂಥಕಾರರು "ಚನ್ನಬಸವ" ನೆಂದು

ಬರೆದಿರುತ್ತಾರೆ. ಆದರೆ ಪ್ರಭುಲಿಂಗಲೀಲೆಯ ತುಂಬೆಲ್ಲ " ಛನ್ನಬಸವ " ನೆಂದು ಬರೆದಿರುತ್ತದೆ. ಆದರೆ ಇದರಲ್ಲಿ ನಿಜವಾವುದು ? ಎಂದು ಪ್ರಶ್ನ ಮಾಡಿದ್ದಕ್ಕೆ— ಚನ್ನಬಸವನಿಗೆ ಪ್ರಭುಲಿಂಗಲೀಲೆಯ ತುಂಬೆಲ್ಲ **ಛನ್ನಬಸವ** ನೆಂದು ಉಲ್ಲೇಖಿಸಿರುವದು ಮುದ್ರಣ ಪ್ರಮಾದವಿರಬಹುದೆಂದು ಮೊದಲು ಬರೆದು ಪುನಃ ಆ " ಛನ್ನ " ಶಬ್ದವನ್ನೇ ಸಂಸ್ಕೃತದಲ್ಲಿ ಸಿದ್ಧ ಮಾಡಿರುವಿ ; ಇದು ನಿನ್ನ ಮನಸ್ಸಿನ ಚಾಂಚಲ್ಯ ಧರ್ಮವೇ ಸರಿ ! ಶುದ್ಧ ಕನ್ನಡ ಭಾಷೆಯ **ಚನ್ನಬಸವ** ಶಬ್ದವನ್ನು ಪ್ರಭುಲಿಂಗಲೀಲಾಕಾರನು " ಛನ್ನ **ಬಸವ** " ನೆಂದು ಬರೆದುಕೊಂಡು ಸಂಸ್ಕೃತದಲ್ಲಿ ಸಾಧಿಸಿರುವದು ಕೇವಲಅನ್ಯಾಯವಾದದ್ದು !

(೧೨೮—ಉ—ವಿ.) ಚನ್ನಬಸವನು ವಿರಕ್ತನಾಗಿದ್ದನೆಂದು ಕೆಲವು ಗ್ರಂಥಗಳಿಂದ ತಿಳಿದು ಬರುತ್ತದೆ. ಆದರೆ ಇತಿಹಾಸಜ್ಞರು ಬಿಜ್ಜಳನು ಸತ್ತನಂತರ ಅವನ ರಾಜ್ಯವನ್ನು ಇವನು ೩ ತಿಂಗಳುಗಳ ವರೆಗೆ ಆಳಿದನೆಂದು ಬರೆದಿರುತ್ತಾರೆ. ಇದರಲ್ಲಿ ನಿಜವಾವದು ? ಎಂದು ಪ್ರಶ್ನ ಮಾಡಿದ್ದಕ್ಕೆ—ಇತಿಹಾಸಕಾರರ ಅಭಿಪ್ರಾಯವು ಸುಳ್ಳೆಂದು ಬರೆದಿರುತ್ತಿ ; ಬಿಜ್ಜಳನು ಸತ್ತನಂತರ ಚನ್ನಬಸವನು ಅವನ ಅಳಿಯನ ಕೂಡ ಯುದ್ಧ ಮಾಡಿದನೆಂದೂ, ಅಳಿಯ ಬಿಜ್ಜಳನನ್ನು ಸೆರೆಹಿಡದನೆಂದೂ, ಪುನಃ ಶರಣಾಗತನಾದ ಅವನಿಗೆ ಪಟ್ಟವನ್ನು ಕಟ್ಟಿದನೆಂದೂ ೩॥ ತಿಂಗಳುಗಳವರೆಗೆ ರಾಜ್ಯವಾಳಿದನೆಂದೂ ಚನ್ನಬಸವ ಪುರಾಣದ ೫ ನೆಯ ಕಾಂಡ ೯ ನೆಯ ಸಂಧಿಯಲ್ಲಿ ಬರೆದಿರುವ ಕಾರಣ ಇತಿಹಾಸಕಾರರ ಅಭಿಪ್ರಾಯವು ನಿಜವಾದದ್ದೆಂದು ಹೇಳುವದರಲ್ಲೇನು ಸಂದೇಹವು ? ಗ್ರಂಥಗಳನ್ನು ಪೂರ್ವಾಪರ ವಿಚಾರ ಮಾಡದೆ ಇತಿಹಾಸಕಾರರ ಅಭಿಪ್ರಾಯವು ನಿಜವಲ್ಲವೆಂದು ಬರೆಯುವದು ಮಂದ ಬುದ್ಧಿಯ ಲಕ್ಷಣವೇ ಸರಿ ! ರಾಜ್ಯವನ್ನಾಳಿದ ಇವನು ನಿಜವಾದ ವಿರಕ್ತನಲ್ಲ !

(೧೨೯—ಉ—ವಿ.) ಚನ್ನಬಸವನು ವಿರಕ್ತನಾಗಿದ್ದನೆಂದ ಪಕ್ಷದಲ್ಲಿ ತಾನು ಮಂತ್ರಿಯ ಅಳಿಯನಾಗಿ ಲಗ್ನವಾಗದೆ ವಿರಕ್ತ ಪಂಥವನ್ನು ಸ್ವೀಕರಿಸಲು ಕಾರಣವೇನು ? ಎಂದು ಪ್ರಶ್ನ ಮಾಡಿದ್ದಕ್ಕೆ— " ಮಂತ್ರಿಯಾಗಲಿ— ಮಂತ್ರಿಯ ಅಳಿಯನಾಗಲಿ ಅಥವಾ ರಾಜನಾಗಲಿ ಯಾರಿಗೆ ವಿಷಯಗಳಲ್ಲಿ ವೈರಾಗ್ಯ ವುಂಟಾಗುವದೋ ಅವರು ತಾವೇ ವಿರಕ್ತರಾಗುವರು. ಅತಏವ ರಾಜನಾದ ಭರ್ತೃಹರಿಯು ವಿಷಯ ವೈರಾಗ್ಯದಿಂದ ಸನ್ಯಾಸಿಯಾದನೆಂದು ಸುಪ್ರಸಿದ್ಧ ವಿರುತ್ತದೆ. " ಎಂದು ಬರೆದಿರುವಿ ಯಷ್ಟೆ ! **ಭರ್ತೃಹರಿ ನಿಜಗುಣಾರಾಧ್ಯ** ಮೊದಲಾದವರು ನಿಜವಾದ ವೈರಾಗ್ಯಶಾಲಿಗಳೆನ್ನುವದನ್ನು ಎಲ್ಲರೂ ಬಲ್ಲರು ! ಆ ಮಹಾತ್ಮರಿಗೆ ವೈರಾಗ್ಯವು ಉತ್ಪನ್ನವಾದ ಕೂಡಲೆ ಅವರು ಸ್ವಕೀಯ ರಾಜ್ಯಾದಿಗಳಿಗೆ ಬಹಿಷ್ಕಾರವನ್ನು ಹಾಕಿ ಘೋರವಾದ ಕಾನನದಲ್ಲಿ ವಾಸಮಾಡಿ ಶಿವಸಾಯುಜ್ಯವನ್ನೈದಿದರು. ಆ ಮಹನೀಯರಂತೆ ಈ ಚನ್ನಬಸವನು ವೈರಾಗ್ಯದಿಂದ ರಾಜ್ಯವನ್ನು

ಧಿಕ್ಕರಿಸಿ ಘೋರವಾದ ಅರಣ್ಯವನ್ನು ಸೇರಿದನೋ? ಇಲ್ಲ ಸೊಗಸಾಗಿ ಮಂತ್ರಿಯ ಪದವಿಯನ್ನು ವಹಿಸಿ ಬಿಜ್ಜಳಾದಿಗಳನ್ನು ಕೊಲ್ಲಿಸಿ ಅಳಿಯ ಬಿಜ್ಜಳಾದಿಗಳ ಸಂಗಡ ಯುದ್ಧ ಮಾಡಿದನು. ಈ ವಿಷಯವು **ಚನ್ನಬಸವ ಪುರಾಣ– ಶರಣಲೀಲಾಮೃತಾದಿ** ಗ್ರಂಥಗಳಿಂದ ತಿಳಿದು ಬರುತ್ತದೆ. ಅಂದಮೇಲೆ ಇವನಿಗೆ ವೈರಾಗ್ಯಶಾಲಿಯೆನ್ನುವದು ಮಂದತನವಲ್ಲವೇ?

(೧೩೦–ಉ–ವಿ.) ಚನ್ನಬಸವನಲ್ಲಿ ವೈರಾಗ್ಯವಿದ್ದಿಲ್ಲವೆಂದು ಮೇಲಿನ ವಿಮರ್ಶದಲ್ಲಿ ಸ್ಪಷ್ಟವಾಗಿರುತ್ತದೆ. ಆದ್ದರಿಂದ ಇವನು ನಿಜವಾದ ವಿರಕ್ತನಾಗಿರದೆ ಈಗಿನ ವಿರಕ್ತರಂತೆ ನಾಮಧಾರಿ ವಿರಕ್ತನಾಗಿರಬಹುದೆನ್ನುವದೇ ನಿಜವು!

(೧೩೧–ಉ–ವಿ.) ಅಲ್ಲಮನು ಮೃತಪಟ್ಟನಂತರ ಅವನ ಸ್ಥಾನವು ಚನ್ನಬಸವನಿಗೆ ದೊರಕಿತೆಂದು ದುರ್ಗದ ವಿರಕ್ತರೇ ಮೊದಲಾದವರು ತಮ್ಮ ತಮ್ಮ ಪಟ್ಟವಲ್ಲರಿಯಲ್ಲಿ ಬರೆದು ಕೊಂಡಿರುತ್ತಾರೆ. ನೀನು ಮಾತ್ರ ಅಲ್ಲಮನ ಸ್ಥಾನಕ್ಕೆ ಚನ್ನಬಸವನು ಬರಲಿಲ್ಲವೆಂದು ಬರೆದಿರುವಿ; ಸಂತೋಷವೇ ಸರಿ! “**ಯದಹರೇವ ವಿರಜೇತ್ತದ ಹರೇವ ಪ್ರವ್ರಜೇತ್**” ಎಂದು ಶ್ರುತಿಯು ಯಾವ ದಿವಸ ವೈರಾಗ್ಯ ವುಂಟಾಗುವದೋ ಆದಿನವೇ ವನಕ್ಕೆ ತೆರಳ ಬೇಕೆಂದು ಬೋಧಿಸುತ್ತಿದ್ದಾಗ್ಯೂ ವೈರಾಗ್ಯ ಶೀಲರು ಕಾನನದಲ್ಲಿರಬಾರದೆಂದು ನೀನು ಬರೆದಿರುವವನ್ನು ನೋಡಿದರೆ ಶಾಸ್ತ್ರಜ್ಞರು ನಗದೆ ಇರಲಾರರು! ಆದ್ದರಿಂದಲೆ ಸ-ಪ್ರಬೋಧಾಗಮ ಪಾರಮೇಶ್ವರಾಗಮಗಳು “ತ್ಯಕ್ತ್ವಾಗೃಹಮಠಾದೀನಿ ಮನುಷ್ಯಾದಿ ಸ್ಥಲಾನಿಚ। ನಿವಾಸಸ್ತೇನಕರ್ತವ್ಯೋ ವನೇಗಿರಿಗುಹಾದಿಷು॥ ನವಾಸಂ ಕುರತೇ ಗ್ರಾಮೇ ನಪಾಷಂಡೀ ಭವೇತ್ಕ್ವಚಿತ್। ನಗ್ರಾಮ್ಯಾಹಾರಮಿಚ್ಛೇತ ತುರ್ಯವೀರವ್ರತಸ್ಥಿತಃ॥ ಅಕಿಂಚನತ್ವಂ ನಿರ್ಬಾಧೋವಾಸಸ್ತು ವಿಜನೇವನೇ। ಮೌನಂ ಭಿಕ್ಷಾಟನಂಭಕ್ತಿಃ ಪೂಜಾಧ್ಯಾನಂ ಮನುಸ್ಮೃತಿಃ॥ ಇತ್ಯಾದಿ ವಾಕ್ಯಗಳಿಂದ ವಿರಕ್ತನಾದವನು ಗ್ರಾಮದಲ್ಲಿ ವಾಸಮಾಡಕೂಡದೆಂದೂ, ಜನ ಸಂಬಂಧದಿಂದ ದೂರನಾಗಬೇಕೆಂದೂ, ಘೋರವನಗಿರಿಗಹ್ವರಾದಿಗಳಲ್ಲಿ ವಾಸಮಾಡಬೇಕೆಂದೂ, ಭಿಕ್ಷಾನ್ನದಿಂದಲೇ ಉಪಜೀವಿಸಬೇಕೆಂದೂ, ಮೌನಿಯಾಗಿರಬೇಕೆಂದೂ ಬೋಧಿಸುತ್ತವೆ. ಈ ಆಗಮಗಳ ಉಪದೇಶಕ್ಕನುಸಾರವಾಗಿ ಚನ್ನಬಸನಲ್ಲಿ ಒಂದೂ ಗುಣಗಳಿಲ್ಲದಿರುವ ಕಾರಣ ಇವನಿಗೆ ನಿಜವಾದ ವಿರಕ್ತನೆಂದು ಹೇಳದೆ **ಡಾಂಭಿಕ ವಿರಕ್ತನೆಂದು** ಹೇಳಲು ಸಂದೇಹವಿಲ್ಲ.

(೧೩೨–ಉ–ವಿ.) ಚನ್ನಬಸವನು ಷಟ್ಸ್ಥಲ ಸ್ಥಾಪಕನೆಂದರೆ ಇವನಿಗಿಂತ ಪೂರ್ವದಲ್ಲಿ ಷಟ್ಸ್ಥಲಗಳು ಇದ್ದಿಲ್ಲವೇ ಹೇಗೆ? ಎಂದು ಪ್ರಶ್ನ ಮಾಡಿದ್ದಕ್ಕೆ– “ಶ್ರೀಜಗದ್ಗುರು ಪಂಚಾಚಾರ್ಯರು ವೀರಶೈವ ಮತಸ್ಥಾಪಕರೆಂಪರೆ ಅವರಿಗಿಂತ ಪೂರ್ವದಲ್ಲಿ ವೀರಶೈವ ಮತವು ಇದ್ದಿಲ್ಲವೆಂದು ಹೇಳಬಹುದೇ ಹಾಗೆಯೆ?” ಎಂದು ಪುನಃ ಪ್ರಶ್ನವನ್ನು ಮಾಡಿ

ಕೊಂಡು ಚನ್ನಬಸವನನಗಿಂತ ಪೂರ್ವದಲ್ಲಿ ಷಟ್ಸ್ಥಲಗಳು ಇದ್ದಾಗ್ಯೂ ಅವನೇ ಷಟ್ಸ್ಥಲ ಸ್ಥಾಪಕನೆಂಬ ಅಭಿಪ್ರಾಯವನ್ನು ತೋರಿಸಿರುವಿ ; ಹಾಗಾದರೆ ಪರಮಾತ್ಮನು ಮೊದಲೋ ಪ್ರಪಂಚವು ಮೊದಲೋ ? ಎನ್ನುವದನ್ನು ಹೇಳಬಲ್ಲೆಯಾ ? ಪ್ರಪಂಚವು ಮೊದಲೆಂದರೆ ಪ್ರಪಂಚಕರ್ತನಾದ ಪರಮಾತ್ಮನಿಲ್ಲದೆ ಪ್ರಪಂಚವು ಹೇಗೆ ಉತ್ಪನ್ನವಾಯಿತು ? ಪರಮಾತ್ಮನು ಮೊದಲೆಂದರೆ ಶಶವಿಷಾಣದಂತೆ ಇಲ್ಲದ ಪ್ರಪಂಚವನ್ನು ಹೇಗೆ ರಚಿಸಿದನು ? ಆದ್ದರಿಂದ "**ನಾಸತೋವಿದ್ಯತೇಭಾವೋ ನಾಭಾವೋವಿದ್ಯತೇಸತಃ**" ಎಂಬ ಶ್ರುತ್ಯನುಸಾರವಾಗಿ ಅವ್ಯಕ್ತಸ್ಥಿತಿಯಲ್ಲಿದ್ದ ಪ್ರಪಂಚವನ್ನೇ ಅಭಿವ್ಯಕ್ತ ಸ್ಥಿತಿಯಲ್ಲಿ ತಂದನೆಂದು ಹೇಳಬೇಕಾಗುತ್ತದೆ. ಹೀಗೆ ಅಭಿವ್ಯಕ್ತಸ್ಥಿತಿಗೆ ತರುವದೇ ಪ್ರಪಂಚ ಕರ್ತೃತ್ವವು! ಪ್ರಪಂಚಕ್ಕೂ ಪರಮಾತ್ಮನಿಗೂ **ಬೀಜಾಂಕುರನ್ಯಾಯ**ವಿರುತ್ತದೆ. ಇದರಂತೆ ಶ್ರೀಜಗದ್ಗುರು ಪಂಚಾಚಾರ್ಯರು ತಮ್ಮೊಳಗೆ ಆದಿಯಲ್ಲಿ ಅವ್ಯಕ್ತ ಸ್ಥಿತಿಯಲ್ಲಿದ್ದ ವೀರಶೈವ ಮತವನ್ನು ಯಾವತ್ತು ಲೋಕಗಳಲ್ಲಿ ಅಭಿವ್ಯಕ್ತ ಸ್ಥಿತಿಗೆ ತಂದು ಸ್ಥಾಪಿಸಿದವರಾದ ಕಾರಣ, ಪ್ರಪಂಚ ಕರ್ತನು ಪರಮಾತ್ಮನಾಗುವಂತೆ ವೀರಶೈವಮತ ಕರ್ತರು ಶ್ರೀಮತ್ಪಂಚಾಚಾರ್ಯರೇ ಆಗುವರು. ಆದ್ದರಿಂದಲೇ ಈ ಮಹನೀಯರ ವಿಷಯದಲ್ಲಿ ಪರಮಾತ್ಮನು "ತಸ್ಮಾತ್ತಸ್ಮಾಕ್ಷ್ಯಗಿರಿಜೇ ಪಂಚಾನನಸಮುದ್ಭವಾಃ। ಮದಾದಿ ಸರ್ವ ಲೋಕಾನಾಂ ಜಗದ್ಗುರುವರೋತ್ತಮಾಃ ॥" ಈಪ್ರಕಾರವಾಗಿ ನನ್ನ ಲೋಕವೇ ಮೊದಲ್ಗೊಂಡು ಯಾವತ್ತು ಲೋಕಗಳಿಗೂ ಶ್ರೀಮತ್ಪಂಚಾಚಾರ್ಯರೇ ಜಗದ್ಗುರೂತ್ತಮರೆಂದು ಸುಪ್ರಬೋಧಾಗಮದಲ್ಲಿ ಘಂಟಾಘೋಷವಾಗಿ ಉಪದೇಶಿಸಿರುವನು. ಮತ್ತು ವೀರಶೈವ ಮತಕ್ಕೆ ಪಂಚಾಚಾರ್ಯರೇ ಮೂಲ ಕರ್ತೃಗಳಾಗಿರುವದರಿಂದ ವೀರಶೈವ ಮತೀಯರ ದೀಕ್ಷಾದಿ ಮಂಗಲಕಾರ್ಯಗಳಲ್ಲಿ ಸ್ಥಾಪಿಸುವ ಪಂಚಬ್ರಹ್ಮ ಕಲಶಗಳಿಗೆ ಈ ಆಚಾರ್ಯರೇ **ಅಧಿದೇವತೆಗಳಾಗಿ** ಸಮಸ್ತರನ್ನು ಉದ್ಧರಿಸತಕ್ಕದ್ದೆಂದು ಶಾಸನವನ್ನು ಮಾಡಿರುವನು. ಈ ವಿಷಯದ ಬಗ್ಗೆ ವಾರದವರಲ್ಲಿ ಪ್ರಿಂಟಾದ **ಪಂಚಾಚಾರ್ಯೋತ್ಪತ್ತಿ ಪ್ರಕರಣವನ್ನು** ನೋಡು! ಆ ಪರಮಾತ್ಮನ ಶಾಸನದಂತೆ ಅನಾದಿ ಕಾಲದಿಂದ ಈ ಪದ್ಧತಿಯು ವೀರಶೈವ ಧರ್ಮದಲ್ಲಿ ನೆಲೆಗೊಂಡಿರುತ್ತದೆ. ಆದ್ದರಿಂದ ಶ್ರೀಜಗದ್ಗುರು ಪಂಚಾಚಾರ್ಯರೇ ಮತಸ್ಥಾಪಕರೆನ್ನುವದು ಸಿದ್ಧಾಂತವು! ಈ ಸಂದರ್ಭದಲ್ಲಿ ನೀನು ಕೊಟ್ಟಿರುವ "**ಭಗವನ್ ದೇವ ದೇವೇಶ**" ಇತ್ಯಾದಿ ಶ್ಲೋಕಗಳು ಯಾವ ಬಾಧೆಯನ್ನೂ ಉಂಟು ಮಾಡಲಾರವೆಂದು ತಿಳಿ! ಶ್ರೀಮತ್ಪಂಚಾಚಾರ್ಯರ ದೃಷ್ಟಾಂತವನ್ನು ತೆಗೆದುಕೊಂಡು ಚನ್ನಬಸವನೇ ಷಟ್ಸ್ಥಲ ಸ್ಥಾಪಕನೆಂದು ಬರೆದಿರುವದು ಕೇವಲ ದುರಭಿಮಾನವು! ಷಟ್ಸ್ಥಲಗಳಿಗೂ ವೀರಶೈವ ಮತಕ್ಕೂ ಅಂಗಾಂಗಿಭಾವ ಸಂಬಂಧವಿರುವದರಿಂದ ಷಟ್ಸ್ಥಲಗಳನ್ನು ಬೇರೆ ಮಾಡಿಕೊಂಡು ಅವುಗಳಿಗೆ ಬೇರೊಬ್ಬ ಸ್ಥಾಪಕನನ್ನು ಹೇಳುವದು ಧರ್ಮಗ್ರಂಥ ಜ್ಞಾನವಿಲ್ಲದವರ ಮಾತೇ ಸರಿ!

ಒಬ್ಬನಿಗೆ ಷಟ್ಸ್ಥಲ ಸ್ಥಾಪಕನೆಂದರೆ ಮತ್ತೊಬ್ಬನಿಗೆ ಅಷ್ಟಾವರಣ ಸ್ಥಾಪಕನೆಂತಲೂ ಬೇರೊಬ್ಬನಿಗೆ ಪಂಚಾಚಾರ ಸ್ಥಾಪಕನೆಂತಲೂ ಹೀಗೆ ಒಂದೇ ಮತದಲ್ಲಿ ಅನೇಕಸ್ಥಾಪಕರನ್ನು ಹೇಳಬೇಕಾದೀತು? ಷಟ್ಸ್ಥಲ– ಅಷ್ಟಾವರಣ– ಪಂಚಾಚಾರಗಳೆಲ್ಲವು ವೀರಶೈವ ಮತದ ಅಂಗಗಳೇ ಆಗಿರುವದರಿಂದ ವೀರಶೈವ ಮತಸ್ಥಾಪನಾಚಾರ್ಯರೇ ಇವುಗಳಿಗೆಲ್ಲ ಕರ್ತರೆಂದು ತಿಳಿ! ಆದ್ದರಿಂದ ಚನ್ನಬಸವನಿಗೆ ಷಟ್ಸ್ಥಲ ಸ್ಥಾಪಕನೆನ್ನುವದು ವಿವೇಕಿಗಳ ಲಕ್ಷಣವಲ್ಲ!

(೧೩೪–ಉ–ವಿ.) ಮೇಲಿನ ವಿಮರ್ಶದಲ್ಲಿ ಚನ್ನಬಸವನು ಷಟ್ಸ್ಥಲ ಸ್ಥಾಪಕನಲ್ಲವೆಂದು ಸಿದ್ಧವಾಗಿರುವದು. ಹೀಗಿದ್ದಾಗ್ಯೂ ಇವನಿಗೆ ಸುಮ್ಮ ಸುಮ್ಮನೆ ಅಸತ್ಯವಾಗಿ ಷಟ್ಸ್ಥಲ ಸ್ಥಾಪಕನೆಂದು ಹೇಳುವದರಿಂದ ಇವನಿಗಾಗಲಿ ಅಥವಾ ಇವನ ಗುರುವಾದ ಅಲ್ಲಮನಿಗಾಗಲಿ ನಿಜವಾದ ಷಟ್ಸ್ಥಲಗಳ ಜ್ಞಾನವಿತ್ತೆಂದು ಹೇಳುವದು ಅಸತ್ಯವೆಂದೇ ಭಾವಿಸಬೇಕಾಗುತ್ತದೆ.

(೧೩೫–ಉ–ವಿ.) ಚನ್ನಬಸವನು ಷಟ್ಸ್ಥಲ ಸ್ಥಾಪಕನೆಂದರೆ ಷಟ್ಸ್ಥಲಗಳನ್ನು ಪ್ರತಿಪಾದಿಸತಕ್ಕಂಥ ಯಾವ ಉದ್ಗ್ರಂಥಗಳನ್ನು ಬರೆದಿರುವನು? ಕರಣಹಸಿಗೆ–ಮಂತ್ರಗೋಪ್ಯ– ಮಿಶ್ರಾರ್ಪಣ– ಇವೇ ಉದ್ಗ್ರಂಥಗಳೋ ಅಥವಾ ಮತ್ತಾವಾದರೂ ಲೋಕಮಾನ್ಯಗಳಾದ ಗ್ರಂಥಗಳುಂಟೋ? ಇದ್ದ ಪಕ್ಷದಲ್ಲಿ ಉದಾಹರಿಸತಕ್ಕದ್ದೆಂದು ಪ್ರಶ್ನ ಮಾಡಿದ್ದಕ್ಕೆ– ಚನ್ನಬಸವನು ರಚಿಸಿದ ಕರಣಹಸಿಗೆ– ಮಂತ್ರಗೋಪ್ಯ– ಮಿಶ್ರಾರ್ಪಣಗಳೆಂಬ ಗ್ರಂಥಗಳೇ ಉದ್ಗ್ರಂಥಗಳೆಂದು ಬರೆದು ಆಮೇಲೆ "ದೊಡ್ಡ ದೊಡ್ಡ ಪತ್ರಗಳಲ್ಲಿ ದೊಡ್ಡ ದೊಡ್ಡ ಅಕ್ಷರಗಳಿಂದ ಬರೆಯಲ್ಪಟ್ಟ ದೊಡ್ಡ ದೊಡ್ಡ ಗ್ರಂಥಗಳು ಉದ್ಗ್ರಂಥಗಳೆಂದರೆ ದೊಡ್ಡ ದೊಡ್ಡ ಪತ್ರಗಳಲ್ಲಿ ದೊಡ್ಡ ದೊಡ್ಡ ಅಕ್ಷರಗಳಿಂದ ಬರೆಯಲ್ಪಟ್ಟ ದಾಸರ ಕಥೆಗಳನ್ನು ಬೋಧಿಸುವ ಗ್ರಂಥಗಳಾದರೂ ನಿಮ್ಮ ಮತದಂತೆ ಉದ್ಗ್ರಂಥಗಳಾಗಬೇಕಾಗುವವು." ಎಂದು ಮಹಾ ಬುದ್ಧಿಯನ್ನು ಖರ್ಚು ಮಾಡಿ ಬರೆದು ಅಡೀಚ ಪಂಡೀತನ ಸ್ಮರಣವನ್ನು ಜನರಿಗೆ ತಂದು ಕೊಟ್ಟಿರುವಿ. ದಡ್ಡಾ– ಉದ್ಗ್ರಂಥಗಳೆಂದರೆ ಲೋಕಮಾನ್ಯಗಳಾದ ಗ್ರಂಥಗಳು! ಇಂಥ ಗ್ರಂಥಗಳು ದೊಡ್ಡ ದೊಡ್ಡ ಅಕ್ಷರಗಳಿಂದ ದೊಡ್ಡ ದೊಡ್ಡ ಪತ್ರಗಳಲ್ಲಿ ಬರೆದಿದ್ದರೂ, ಸಣ್ಣ ಸಣ್ಣ ಅಕ್ಷರಗಳಿಂದ ಸಣ್ಣ ಸಣ್ಣ ಪತ್ರಗಳಲ್ಲಿ ಬರೆದಿದ್ದರೂ ಅವು ಲೋಕಮಾನ್ಯಗಳೇ ಆಗುತ್ತವೆ. ಶ್ರೀರೇಣುಕಭಾಷ್ಯ– ಶ್ರೀಕರಭಾಷ್ಯ– ಶ್ರೀಕಂಠಭಾಷ್ಯ– ಸಿದ್ಧಾಂತಶಿಖಾಮಣಿ– ಶಿವಾದ್ವೈತಮಂಜರೀ– ಕ್ರಿಯಾಸಾರ– ಲಿಂಗಧಾರಣಚಂದ್ರಿಕಾ– ನಂದಿಕೇಶ್ವರಕಾಶಿಕಾ– ಸಿದ್ಧಾಂತಸಾರಾವಲಿ ಮೊದಲಾದ ಅಸಂಖ್ಯ ಲೋಕಮಾನ್ಯಗಳಾದ ಗ್ರಂಥಗಳು ಯಾವ ಅಕ್ಷರಗಳಲ್ಲಿ ಬರೆದರೇನು! ಅವು ಲೋಕಮಾನ್ಯಗಳೇ ಆಗುತ್ತವೆ. ಲೋಕ

ಮಾನ್ಯಗಳಾದ ಗ್ರಂಥಗಳನ್ನು ಯಾವತ್ತು ಪ್ರಾಮಾಣಿಕ ಪಂಡಿತರು ಮನ್ನಿಸುತ್ತಾರೆ, ತಮ್ಮ ತಮ್ಮ ಗ್ರಂಥಗಳಲ್ಲಿ ಪ್ರಮಾಣಗಳನ್ನಾಗಿ ಉದಾಹರಿಸುತ್ತಾರೆ. ಇಂಥ ಗ್ರಂಥಗಳೇ ಉದ್ಗ್ರಂಥಗಳೆನಿಸುತ್ತವಲ್ಲದೆ ಬೇರೆ ಗ್ರಂಥಗಳು ಉದ್ಗ್ರಂಥಗಳೆನಿಸುವದಿಲ್ಲ; ನಿನ್ನ ಚನ್ನಬಸಪ್ಪನ ಗ್ರಂಥಗಳಾದ ಕರಣಹಸಿಗಿ– ಮಂತ್ರಗೋಪ್ಯ– ಮಿಶ್ರಾರ್ಪಣಗಳೆಂಬ ಗ್ರಂಥ ರತ್ನಗಳನ್ನು ಯಾರಾದರೂ ಪ್ರಾಚೀನ ಪ್ರಾಮಾಣಿಕ ಗ್ರಂಥಕಾರರು ಪ್ರಮಾಣಗಳನ್ನಾಗಿ ತೆಗೆದು ಕೊಂಡಿರುವರೋ? ಇದನ್ನು ತೋರಿಸ ಬಲ್ಲೆಯಾ? ಉದ್ಗ್ರಂಥಗಳ ಸ್ವರೂಪವನ್ನು ತಿಳಿಯದೆ ನಿನ್ನ ಮನಸಿಗೆ ಬಂದಂತೆ ಇವುಗಳಿಗೆ ಉದ್ಗ್ರಂಥಗಳೆಂದು ಬರೆದರೆ ಉದ್ಗ್ರಂಥಗಳಾಗ ಬಲ್ಲವೋ? ನಿನ್ನ ಬರವಣಿಗೆಯು ರಾಜರಂತೆ ಸರ್ವ ಅವಯವಗಳಿಂದ ಯುಕ್ತನಾದ ನನ್ನ ಮಗನಾದರೂ ರಾಜಚೂಡಾಮಣಿಯೇ ಎಂದು ಹೇಳಿಕೊಳ್ಳುತ್ತ ತಿರುಗುವ ದರಿದ್ರನ ಪ್ರಲಾಪದಂತೆಯೇ ಸರಿ!

(೧೩೬–ಉ–ವಿ.) ಶ್ರೀಜಗದ್ಗುರು ರೇಣುಕಾಚಾರ್ಯರು ಅಗಸ್ತ್ಯ ಮಹರ್ಷಿಗಳಿಗೆ ಬೋಧಿಸಿದ ನೂರೊಂದು ಸ್ಥಲಗಳಿಗೂ ಚನ್ನಬಸವ ಮೊದಲಾದ ವಚನಕಾರರು ಬೋಧಿಸಿದ ನೂರೊಂದು ಸ್ಥಲಗಳಿಗೂ ಭೇದವುಂಟೇ ಹ್ಯಾಗೆ? ಎಂದು ಪ್ರಶ್ನೆ ಮಾಡಿದಕ್ಕೆ– ಭೇದವಿಲ್ಲೆಂದು ಬರೆದಿರುವಿ; ಹಾಗಾದರೆ ನೋಡು! ಸಿದ್ಧಾಂತ ಶಿಖಾಮಣಿಯ ಲಿಂಗಧಾರಣ ಸ್ಥಲದಲ್ಲಿ– "ಯದಿಪ್ರಮಾದಾತ್ಪತಿತೇ ಲಿಂಗೇದೇಹಾನ್ಮಹೀತಲೇ। ಪ್ರಾಣಾನ್ವಿಮುಂಚಸಹಸಾ ಪ್ರಾಪ್ತಯೇ ಮೋಕ್ಷ ಸಂಪದಃ ||" ಇತ್ಯಾದಿ ಪ್ರಮಾಣಗಳಿಂದ ಗುರುಕೊಟ್ಟ ಇಷ್ಟಲಿಂಗವು ದೇಹದಿಂದ ಅಗಲಿದ್ದಾದರೆ ಅಲ್ಲಿಯೇ ಪ್ರಾಣವನ್ನು ಬಿಡಬೇಕೆಂದು ಶ್ರೀರೇಣುಕಾಚಾರ್ಯರು ಬೋಧಿಸಿರುತ್ತಾರೆ. ಆದರೆ ವಚನಕಾರರು– "ಅಂಗದೊಳಗೆ ಮಹಾಲಿಂಗವಿರಲು ಕೈಯ್ಯಲಿಂಗವು ಬಿದ್ದಿತೆಂದು ನೆಲದೊಳಗಂಗವ ಹೂಣುವರು ಭಂಗಬಡುವರಲ್ಲ ಗುಹೇಶ್ವರ || ಮತ್ತು "ಪ್ರತಿಯಿಲ್ಲದೆ ಲಿಂಗವು ಭಿನ್ನವಾಯಿತ್ತೆಂದು ತನುವಿನ ಮೇಲೆ ಶಸ್ತ್ರವ ನಿಕ್ಕಿಕೊಂಡು ಆತ್ಮಘಾತವ ಮಾಡಿ ಕೊಂಬ ದ್ರೋಹಿಯ ಮುಖವ ನೋಡಲಾಗದು ಕೂಡಲ ಚನ್ನಸಂಗಮದೇವ || ಇತ್ಯಾದ್ಯನೇಕ ವಚನಗಳಿಂದ ಇಷ್ಟಲಿಂಗವು ಹೋದರೆ ಪ್ರಾಣವನ್ನು ಬಿಡಬಾರದೆಂದು ಬರೆಯುತ್ತಾರೆ.

ಶ್ರೀರೇಣುಕಾಚಾರ್ಯರು ಭಕ್ತಮಾರ್ಗ ಕ್ರಿಯಾಸ್ಥಲದಲ್ಲಿ– ಸ್ವಮಾರ್ಗಾಚಾರವರ್ತಿಭ್ಯಃ ಸ್ವಜಾತಿಭ್ಯಃ ಸದಾವ್ರತೀ | ದದ್ಯಾತ್ತೇಭ್ಯಃ ಸಮಾದದ್ಯಾತ್ಕನ್ಯಾಂ ಕುಲಸಮುದ್ಭವಾಂ ||" ಇತ್ಯಾದಿ ಶ್ಲೋಕಗಳಿಂದ ತಮ್ಮ ತಮ್ಮ ಜಾತಿಗಳಲ್ಲಿಯೇ ವಿವಾಹ ಮಾಡಿ ಕೊಳ್ಳಬೇಕೆಂದು ಬೋಧಿಸುತ್ತಾರೆ. ಆದರೆ ವಚನಕಾರರು– "ಸರ್ವರೂ ರುದ್ರಗಣಂಗಳೆಂಬೆ ಸರ್ವರೂ ಸದ್ಭಕ್ತರೆಂಬೆ ಅವರಲ್ಲಿ ಕುಲವನೋಡದೆ ಆಚಾರವ ನೋಡಿ ಅವರಿಗೆ

ಬೇಕಾದ ಹೆಣ್ಣು ಕೊಟ್ಟು ತಮಗೆ ಬೇಕಾದ ಹೆಣ್ಣು ತಂದುಕೊಂಬುದು ಈ ಕ್ರಮವ ನರಿಯುವವರ ಭಕ್ತಿ ಹೊಲತಿ ಶುದ್ಧನೀರ ವಿಂದಂತಾಯಿತ್ತು ಕೂಡಲ ಸಂಗಮದೇವ|| ಇತ್ಯಾದ್ಯನೇಕ ವಚನಗಳಿಂದ ಬೇಕಬೇಕಾದ ಜಾತಿಗಳಲ್ಲಿ ಲಗ್ನ ಮಾಡಿಕೊಳ್ಳಬೇಕೆಂದು ಹೇಳಿರುತ್ತಾರೆ. ಇತ್ಯಾದ್ಯನೇಕ ಸ್ಥಲಗಳಲ್ಲಿ ಸಿದ್ಧಾಂತ ಶಿಖಾಮಣಿಯ ಮಾರ್ಗಕ್ಕೂ ವಚನಕಾರರ ಮಾರ್ಗಕ್ಕೂ ಭೂಮ್ಯಾಕಾಶದಷ್ಟು ಅಂತರವಿದ್ದರೂ ಎರಡೂ ಒಂದೇ ಆಗಿರುವವೆಂದು ಬರೆದಿರುವ ನಿನ್ನ ಬುದ್ಧಿಗೆ ಬೆಲೆಯಿಲ್ಲ !

"ವೇದವ ನೋದುವವರೆಲ್ಲ ಬಂಜೆಯ ಮಕ್ಕಳು– ಶಾಸ್ತ್ರವನೋದುವವರೆಲ್ಲ ಸೂಳೆಯ ಮಕ್ಕಳು– ಪುರಾಣವ ಹೇಳುವವರೆಲ್ಲ ಕುಂಟಣಗಿತ್ತಿಯ ಮಕ್ಕಳು– ತರ್ಕ ತಂತ್ರಗಳ ನೋದಿ ಹೇಳುವರೆಲ್ಲ ವೈದ್ಯಕಾರತಿಯ ಮಕ್ಕಳು– ಇಂತೀ ವೇದಾಗಮ ಶಾಸ್ತ್ರ ಪುರಾಣ ತರ್ಕ ತಂತ್ರಂಗಳೆಲ್ಲ ಕೇಳಿ ಆಚರಿಸುವರೆಲ್ಲ ಡೊಂಬಜಾತಿ ಹಾರ್ತಿಯ ಮಕ್ಕಳು– ಇಂತಪ್ಪ ಜಡಮತಿ ವ್ರತಭ್ರಷ್ಟ ಮೂಳ ಹೊಲೆಯರಿಗೆ ಭವಬಂಧನ ವೆಂದಿಗೂ ಹಿಂಗದು, ಮುಕ್ತಿ ದೋರದು, ಇಂತಿವರ ಪುಣ್ಯಕ್ಕೆ ಅಧಿಕಾರಿಗಳಾದ ಬ್ರಹ್ಮ ವಿಷ್ಣು ರುದ್ರ ಮೊದಲಾದ ದೇವತೆಗಳಿಗೆ ಮುನ್ನನೇಭವಹಿಂಗದು, ಮುಕ್ತಿ ದೊರದು ಎಂದನಯ್ಯ ನಿಮ್ಮ ಶರಣ ಕಾಡಿನೊಳಗಾದ ಶಂಕರ ಪ್ರಿಯ ಚನ್ನಕದಂಬ ಲಿಂಗ ನಿರ್ಮಾಯ ಪ್ರಭುವೇ||

"ಶಿಖಾ ಬ್ರಾಹ್ಮಣ– ನಯನಕ್ಷತ್ರಿಯ– ನಾಸಿಕಬಣಜಿಗ– ಅಧರಒಕ್ಕಲಿಗ– ಕರ್ಣಗೊಲ್ಲ– ಕೊರಳುಕುಂಬಾರ– ಬಾಹು ಪಂಚಾಳ– ಅಂಗೈಉಪ್ಪಾರ– ನಖನಾಯಿದ–ಒಡಲುಡೊಂಬ– ಬೆನ್ನು ಅಗಸ– ಚರ್ಮಜಾಡ– ಪೃಷ್ಟಸ್ಥಾನಕಬ್ಬಲಿಗ– ಒಳದೊಡೆಹೊಲೆಯ ಮೊಣಕಾಲು ಈಡಿಗ– ಕಣಕಾಲು ಸಮಗಾರ– ಮೇಗಾಲು ಮುಚ್ಚಿಗ– ಚಲಪಾದವೆಂಬ ಅಂಗಾಲು ಶುದ್ಧ ಮಾದಿಗ ಕಾಣಿರೋ– ಇಂತೀ ಹದಿನೆಂಟು ಜಾತಿ ತನ್ನಲ್ಲುಂಟು. ಇವು ಇಲ್ಲವೆಂದು ಜಾತಿಗೆ ಹೋರುವ ಅಜ್ಞಾನಿಗಳ ನಮ್ಮ ಸೊಡ್ಡಳ ದೇವನು ಮೆಚ್ಚನಯ್ಯಾ|| ಈ ಪ್ರಕಾರವಾಗಿ ಅನಂತಾನಂತ ವಚನಗಳಿರುವವು. ವಿಸ್ತಾರ ಭಯದಿಂದ ಬರೆಯುವದನ್ನು ಬಿಟ್ಟಿರುವೆವು. ಈ ಮೇಲೆ ತೋರಿಸಿದ ವಚನಗಳು ಸಿದ್ಧಾಂತ ಶಿಖಾಮಣಿಯಲ್ಲಿ ಪ್ರತಿಪಾದಿತಗಳಾದ ಯಾವ ಯಾವ ಸ್ಥಲಗಳಿಗೆ ಸಂಬಂಧವಾಗಿರುತ್ತವೆನ್ನುವದನ್ನು ಸ್ಪಷ್ಟವಾಗಿ ತೋರಿಸಿ ಜಗತ್ತಿಗೆ ಉಪಕಾರವನ್ನಾದರೂ ಮಾಡಬಾರದೇ ?

(೧೩೭–೧೩೮–೧೩೯–ಉ–ವಿ.) ಚನ್ನಬಸವನು ವಿರಕ್ತನಾಗಿದ್ದರೂ ಇವನು ನಿಷ್ಕಾರಣವಾಗಿ ಯುದ್ಧವನ್ನು ಮಾಡಲಿಲ್ಲವೆಂದೂ, ಬಿಜ್ಜಳನ ಅಳಿಯನೂ ಹಾಗೂ ಅವನ ಮಗನಾದ ರಾಯಮುರಾರಿಯೂ ಯುದ್ಧಕ್ಕೆ ಬರಲು ಅವರೊಡನೆ ಯುದ್ಧ ಮಾಡಿದನೆಂದೂ ಬರೆದಿರುವಿ. ಈ ಸಂದರ್ಭದಲ್ಲಿ ಶಿವನಿಂದಕರನ್ನು ಕೊಲ್ಲಬೇಕೆಂದು ಕೆಲವು ಶ್ಲೋಕಗಳನ್ನು ಉದಾಹರಿಸಿರುವಿಯಷ್ಟೆ! ಬಿಜ್ಜಳಾದಿಗಳು ಶಿವದ್ರೋಹಿಗಳಾಗಿದ್ದಿಲ್ಲವೆಂದು

೬೬–೬೮– ನೆಯ ವಿಮರ್ಶೆಗಳಲ್ಲಿ ಸಿದ್ಧವಾಗಿದೆ ನೋಡು! ಮಿಶ್ರವಿವಾಹವನ್ನು ಮಾಡಿ ಧರ್ಮವನ್ನು ಹಾಳು ಮಾಡಲುದ್ಯುಕ್ತರಾದ ಹರಳಯ್ಯ ಮಧುವಯ್ಯರೆಂಬ ಪಾಪಿಗಳನ್ನು ರಾಜನೀತಿಯಂತೆ ದಂಡಿಸಿ ಸನಾತನ ಧರ್ಮವನ್ನು ಕಾಯ್ದುವ ರೊಡನೆ ಯುದ್ಧ ಮಾಡಿದ ಇವನಿಗೆ ನಿಜವಾದ ವಿರಕ್ತನೆಂಬು ಹೇಳದೆ ಕ್ರೂರವಿರಕ್ತನೆಂದು ಹೇಳಲು ಏನೂ ಬಾಧಕವಿಲ್ಲ.

(೧೪೦–ಉ–ವಿ.) ಚನ್ನಬಸವನು ಷಣ್ಮುಖನ ಅವತಾರಿಯಲ್ಲವೆಂದು ೧೨೩ ನೆಯ ವಿಮರ್ಶೆದಲ್ಲಿ ಸಿದ್ಧವಾಗಿದೆ ನೋಡು. ಅಂದಮೇಲೆ ಇವನು ಮಲ್ಲೂಖಾನನ ಕಡೆ ಯಿಂದ ತನ್ನ ಸಹಾಯಕ್ಕಾಗಿ ೧೨ ಸಾವಿರ ಸೈನ್ಯವನ್ನು ಯುದ್ಧಕ್ಕಾಗಿ ತೆಗೆದು ಕೊಂಡಿರುವದು ನಿಜವೇ ಇರುತ್ತದೆ. ಹೀಗಿದ್ದಾಗ್ಯೂ ಈ ಸಂದರ್ಭದಲ್ಲಿ ಷಣ್ಮುಖ– ದೇವಸೇನೆ ಯರ ದೃಷ್ಟಾಂತವನ್ನು ಕೊಟ್ಟಿರುವದು ಕೇವಲ ಅಸಂಗತವಿರುತ್ತದೆ. ನೀನು ಪ್ರತಿ ಯೊಂದು ಮಾತಿನಲ್ಲಿ “ಲೌಕಿಕೀಂರೀತಿಮಾಸಾದ್ಯ - ಲೌಕಿಕೀಂರೀತಿಮಾಸಾದ್ಯ” ಎಂದು ಪುನಃಪುನಃ ತೆಗೆದುಕೊಳ್ಳುವಿಯಷ್ಟೆ! ವಿರಕ್ತ ನಾದವನು “ಲೌಕಿಕಾಚಾರವರ್ಜಿತಃ” ಎಂಬ ನಿಯಮದಂತೆ ಲೌಕಿಕಾಚಾರಗಳಿಂದ ದೂರನಾಗಿರಬೇಕೆಂದು ಆಗಮಗಳು ಹೇಳುತ್ತಿದ್ದಾಗ್ಯೂ ಇವನು ಲೌಕಿಕರಂತೆ ನಡೆದನೆಂದ ಮೇಲೆ ಇವನಿಗೆ ನಿಜವಾದ ವಿರಕ್ತನೆಂದೆನ್ನುವ ಬಗೆಹ್ಯಾಗೆ? ವಿರಕ್ತನೆಂದೆನ್ನಬೇಕೆಂದರೆ ಜಗತ್ತಿನಲ್ಲಿರುವ ಯಾವತ್ತು ಜನರಿಗೆಲ್ಲ ವಿರಕ್ತರೆನ್ನಬೇಕಾಗುತ್ತದೆ. ಯಾಕಂದರೆ– ಅವರಿಗೂ ಕೂಡ “ಲೌಕಿಕೀಂ ರೀತಿಮಾಸಾದ್ಯ” ಎಂದು ಹೇಳಲಿಕ್ಕೆ ಬರುತ್ತದಲ್ಲವೇ! “ಲೌಕಿಕೀಂರೀತಿಮಾಸಾದ್ಯ” ಎಂಬ ಮಹಾ ಸೂತ್ರವನ್ನು ನಿನಗೆ ಯಾವ ಮಹಾ ಗುರುವು ಉಪದೇಶಿಸಿರುವನೋ ತಿಳಿಯದಾಗಿದೆ.

(೧೪೧–ಉ–ವಿ.) ಚನ್ನಬಸವನು ಅಲ್ಲಮನ ಸ್ಥಾನಕ್ಕೆ ಅಧಿಕಾರಿಯಾಗಬೇಕಾದರೆ ಅವನು ತೀರಿಕೊಂಡ ನಂತರ ಆದನೋ ಅಥವಾ ಅವನು ಇರುವಾಗಲೇ ಆದನೋ? ಎಂದು ಪ್ರಶ್ನೆ ಮಾಡಿದ್ದಕ್ಕೆ– ಅಲ್ಲಮನು ಇರುವಾಗಲೇ ಅವನ ಸ್ಥಾನಕ್ಕೆ ಅಧಿಕಾರಿಯಾದನೆಂದು ಬರೆದಿರುವಿ ; ಈ ವಿಷಯದಲ್ಲಿ ಯಾವ ಪ್ರಮಾಣವನ್ನೂ ಕೊಟ್ಟಿಲ್ಲ ; ನಿನ್ನ ವಾಕ್ಯವೇ ಪ್ರಮಾಣವೇ ಹೇಗೆ?

(೧೪೨–ಉ–ವಿ.) ಚನ್ನಬಸವನು ಉಳವಿಯಲ್ಲಿ ದೇಹಬಿಟ್ಟನೋ ಅಥವಾ ಅನ್ಯಸ್ಥಾನದಲ್ಲಿ ದೇಹ ಬಿಟ್ಟನೋ? ಎಂದು ಪ್ರಶ್ನೆ ಮಾಡಿದ್ದಕ್ಕೆ– ಇವನು ಉಳವಿಯಲ್ಲಿ ದೇಹಸಹಿತನಾಗಿ ಗುಪ್ತನಾಗಿರುವನೆಂದು ಬರೆದಿರುವಿ. ಗುಪ್ತನಾದನೆಂದರೆ ಯಾರದಾದರೂ ಭಯದಿಂದ ಗುಪ್ತನಾದನೋ ಅಥವಾ ಮತ್ಯಾವ ಕಾರಣದಿಂದಾದರೂ ಗುಪ್ತನಾದನೋ? ಗುಪ್ತನಾದ ಬಗೆಯನ್ನು ವಿವರಿಸು!

(೧೪೩-೧೪೪-ಉ-ವಿ.) ಉಳವಿಯಲ್ಲಿರತಕ್ಕ ಚನ್ನಬಸವನ ಸಮಾಧಿಯು ಯೋಗ ಸಮಾಧಿಯೆಂದೂ, ಶಿವಕ್ಷೇತ್ರಯಾತ್ರೆಗಳನ್ನು ಮಾಡುವಂತೆ ಅದರ ಯಾತ್ರೆಯನ್ನು ಮಾಡಬೇಕೆಂದೂ, ಆ ಸಮಾಧಿಗೆ ಗುರು ಸಂಬಂಧವೆಂದರೂ ಅಡ್ಡಿಯಿಲ್ಲ ; ನಾವು ಮಾತ್ರ ಜಂಗಮ ಸಂಬಂಧವೆಂದು ಭಾವಿಸುತ್ತೇವೆಂದೂ, ಚನ್ನಬಸವನು ಜಂಗಮನಾಗಿದ್ದನೆಂದೂ, ವಿರಕ್ತನೇ ಅಷ್ಟಾವರಣಾಂತರ್ಗತ ಜಂಗಮಪದವಾಚ್ಯನೆಂದೂ, ಗುರುಸ್ಥಲದ ಚರಮೂರ್ತಿಯು ಅಷ್ಟಾವರಣಾಂತರ್ಗತನಾಗುವದಿಲ್ಲವೆಂದೂ ಶಂಕಾ ಸಮಾಧಾನ ಮೂಲಕ ನಿನ್ನ ಅಭಿಪ್ರಾಯವನ್ನು ತೋರಿಸಿರುವಿಯಷ್ಟೆ! ಅಸ್ತು! ಹಿಂದಿನ ಯಾವತ್ತು ವಿಮರ್ಶೆಗಳಿಂದ ಚನ್ನಬಸವನು ವಿರಕ್ತನಾಗಿದ್ದಿಲ್ಲವೆಂದೂ, ಇವನು ಮಂತ್ರಿ ಪದವಿಯಿಂದ ಯುಕ್ತನಾಗಿದ್ದನೆಂದೂ, ಜಾತಿ ಸಂಕರ ಮಾಡುವ ಕೃತಿಯಲ್ಲಿ ತೊಡಗಿದ್ದನೆಂದೂ, ರಾಜ್ಯದಾಶೆಗಾಗಿ ಯುದ್ಧವನ್ನು ಮಾಡಿದನೆಂದೂ, ಇವನ ಉತ್ಪತ್ತಿಯೇ ಒಂದು ರೀತಿಯಾಗಿ ವಿಲಕ್ಷಣವಾಗಿರುವದೆಂದೂ ಸ್ಪಷ್ಟವಾಗಿರುತ್ತದೆ. ಹೀಗಿದ್ದಾಗ್ಯೂ ಇವನಿಗೆ ಗುರುವೆಂದರೂ ಅಡ್ಡಿಯಿಲ್ಲವೆಂತಲೂ ಜಂಗಮನೆಂತಲೂ ಬರೆದಿರುವದು ಅತ್ಯಂತ ಅನ್ಯಾಯವು! ಇವನು ಪವಿತ್ರ ಗುರುವಂಶದಲ್ಲಿ ಉತ್ಪನ್ನನಾಗದೆ ಇರುವ ಕಾರಣ ಇವನಿಗೆ **ಗುರುವೆಂದಾಗಲಿ** ಅಥವಾ **ಜಂಗಮನೆಂದಾಗಲಿ** ಹೇಳಲಿಕ್ಕೆ ಬರುವದಿಲ್ಲ. ಯಾಕಂದರೆ **ಗುರುಜಂಗಮಾಧಿಕಾರಗಳು ಶುದ್ಧ ಗುರುಕುಲೋತ್ಪನ್ನರಿಗೆ** ದೊರೆಯುತಕ್ಕದ್ದೆಂದು ಧರ್ಮಗ್ರಂಥಗಳು ಘಂಟಾಘೋಷವಾಗಿ ಸಾರುತ್ತವೆ. ಈ ವಿಷಯದಲ್ಲಿ- "ಗುರುಸ್ಥಲ ಸಮಾಖ್ಯಾತಾ ವೀರಮಾಹೇಶ್ವರಾಭಿಧಾಃ | ಏತೇಗುರುಪದಾಧ್ಯಕ್ಷಾ ನಾನ್ಯೇಲಾಂಛನಧಾರಿಣಃ || ಅತಃಸ್ವವಂಶಜಾನ್ ಬಾಲಾನ್ ಗೃಹೀತ್ವಾತಾನ್ಪರಾನನೇ| ವೀರಮಾಹೇಶ್ವರೀಂ ದೀಕ್ಷಾಂ ಕೃತ್ವಾತೇಪುತ್ರವರ್ಗಿಣಃ || ಪಟ್ಟಾಭಿಷೇಕಯುಕ್ತಾಂಶ್ಚ ಶಂಖಮುದ್ರಾನ್ವಿತಾನ್‌ಭುವಿ| ಷಟ್ಸ್ಥಲಜ್ಞಾನಸಂಪನ್ನಾನ್ ಕುರ್ವಂತಿಚರಸಂಜ್ಞಕಾನ್|| ಈಪ್ರಕಾರವಾಗಿ ವೀರಶೈವ ಸದಾಚಾರ ಸಂಗ್ರಹದ ಪ್ರಮಾಣಗಳುಂಟು. ಈ ಪ್ರಮಾಣಗಳ ಅಭಿಪ್ರಾಯಕ್ಕನುಸಾರವಾಗಿ ಚನ್ನಬಸವನು ಶುದ್ಧ ಗುರುಸ್ಥಲವಂಶದಲ್ಲಿ ಹುಟ್ಟದಿರುವ ಕಾರಣ ಇವನಿಗೆ ಗುರುವೆಂದೂ ಹಾಗೂ ಜಂಗಮನೆಂದೂ ಹೇಳುವದು ಮಂದತನವು! ಹಾಗೂ "ಸರ್ವತ್ರೈಕಮತಿಂಕೃತ್ವಾ ಸಮದೃಷ್ಟಿಂ ಸಮುಕ್ಷಮಾಂ | ಸದಾತೃಪ್ತಿಂಸಮಾಸಾದ್ಯ ಸದಾನಂದೀಭವನ್‌ಸ್ವಯಂ||" ಎಂಬೀ ಜಂಗಮ ಲಕ್ಷಣಾನುಸಾರವಾಗಿ ಚನ್ನಬಸವನಲ್ಲಿ **ಸಮದೃಷ್ಟಿ ಕ್ಷಮಾದಿಗಳು** ಇಲ್ಲದ ಕಾರಣ ಇವನು ಜಂಗಮನಲ್ಲವೆಂದು ಅಜ್ಞಾನಿಗಳೂ ಕೂಡ ಹೇಳಬಲ್ಲರು! ಇವನಲ್ಲಿ ಮೇಲೆ ತೋರಿಸಿದ ಗುಣಗಳಿದ್ದಿಲ್ಲವೆನ್ನುವದಕ್ಕೆ ಬಿಜ್ಜಳನನ್ನು ಕೊಲ್ಲಿಸಿದ್ದೂ ಅವನ ಮಗನೊಡನೆ ಯುದ್ಧ ಮಾಡಿದ್ದೂ ಇವೇ ದೊಡ್ಡ ಸಾಕ್ಷಿಗಳು! ವಿರಕ್ತನು ಅಷ್ಟಾವರಣಾಂತರ್ಗತ ಜಂಗಮನಾಗುವದಿಲ್ಲವೆಂಬ ವಿಷಯವನ್ನು "**ಸನ್ಯಾಸಾಶ್ರಮ ವಿಮರ್ಶ ತತ್ವಸ್ಥಿರೀಕರಣ**" ಎಂಬ ಗ್ರಂಥದಲ್ಲಿ ಅನೇಕ ಶಂಕಾ ಸಮಾಧಾನ ಪೂರ್ವಕವಾಗಿ ಸಿದ್ಧ

ಮಾಡಿರುತ್ತದೆ. ನೋಡು! ಆರಗಳೆಯನ್ನು ಇಲ್ಲಿ ತೆಗೆಯುವ ಕಾರಣವಿಲ್ಲ! ಆದ್ದರಿಂದ ಚನ್ನಬಸವನು ಗುರುಜಂಗಮ ಪದವಾಚ್ಯನಾಗದಿರುವದರಿಂದಲೂ, ಲೋಕದಲ್ಲಿ ಮೃತಪಟ್ಟ ಯಾವತ್ತು ಜನರ ಸಮಾಧಿಗಳಿರುವಂತೆ ಇವನ ಸಮಾಧಿಯಾದರೂ ಇರುವದರಿಂದಲೂ ಅವನ ಸಮಾಧಿಗೆ ಶುದ್ಧ ಸಾಂಪ್ರದಾಯದ ವೀರಶೈವರು ಭಕ್ತಿಯಿಂದ ನಡೆದುಕೊಳ್ಳಬಾರದೆನ್ನುವದೇ ಸಿದ್ಧಾಂತವು! ಸಿದ್ಧಾಂತವು!! ಸಿದ್ಧಾಂತವು!!!

---

(೧೪೫–ಉ–ವಿ.) ಅಲ್ಲಮನು ಇವನು ಯಾವನು? ಎಂದು ಪ್ರಶ್ನೆ ಮಾಡಿದ್ದಕ್ಕೆ– ಇವನು ಪರಶಿವನ ಶಿಖಾಚಕ್ರದಿಂದುತ್ಪನ್ನನಾದ ನಿರಂಜನ ಚರಲಿಂಗ ಸ್ವರೂಪನೆಂದು ಉತ್ತರವನ್ನು ಬರೆದಿರುವಿ. "ಚರಲಿಂಗ ಸ್ವರೂಪನು" ಎಂದು ಹೇಳಿದ ಮೇಲೆ ಇವನು ಸಾಕ್ಷಾಚ್ಚರಲಿಂಗನಾಗದೆ ಅವನಗಿಂತ ಭಿನ್ನನಾದನೆಂದು ಹೇಳಿದಂತಾಗಲಿಲ್ಲವೆ? ಸಾಧು!

(೧೪೬–ಉ–ವಿ.) ಇವನು ಆದಿಯಲ್ಲಿ ವೀರಶೈವನೋ ಅಥವಾ ಅನ್ಯನೋ? ವೀರಶೈವನೆಂಬ ಪಕ್ಷದಲ್ಲಿ ಇವನಿಗೆ ಲಿಂಗಧಾರಣವನ್ನು ಯಾರು ಮಾಡಿದರು? ಎಂದು ಪ್ರಶ್ನೆಮಾಡಿದ್ದಕ್ಕೆ– ಇವನಿಗೆ ಯಾರೂ ಲಿಂಗವನ್ನು ಧರಿಸಿಲ್ಲವೆಂದೂ, ಶ್ರೀಜಗದ್ಗುರು ರೇಣುಕಾಚಾರ್ಯರಂತೆ ಲಿಂಗಸಹಿತನಾಗಿಯೇ ಹುಟ್ಟಿದನೆಂದೂ ಬರೆದಿರುವಿ ಯಷ್ಟೆ! ಆದರೆ ಇವನು ಲಿಂಗಸಹಿತನಾಗಿ ಹುಟ್ಟಿದನೆಂಬ ವಿಷಯವು ಯಾವ ಗ್ರಂಥಗಳಲ್ಲಿಯೂ ಕೂಡ ಬರೆದಿರುವದಿಲ್ಲವಾದ ಕಾರಣ ಇವನ ವಿಷಯದಲ್ಲಿ ಶ್ರೀರೇಣುಕಾಚಾರ್ಯರ ದೃಷ್ಟಾಂತವನ್ನು ತೆಗೆದುಕೊಂಡಿರುವದು ಅಸಂಗತವಲ್ಲವೇ?

(೧೪೭–ಉ–ವಿ.) ಪ್ರಭುಲಿಂಗ ಲೀಲೆಯಲ್ಲಿ ಇವನ ಉತ್ಪತ್ತಿಯನ್ನು ಬರೆಯುವಾಗ ಇವನು ಲಿಂಗಧಾರಣ ಸಹಿತನಾಗಿಯೇ ಹುಟ್ಟಿದನೆನ್ನುವದನ್ನು ಯಾಕೆ ಬರೆಯಲಿಲ್ಲ? ಎಂದು ಪ್ರಶ್ನೆ ಮಾಡಿದ್ದಕ್ಕೆ– ಸಿದ್ಧಾಂತ ಶಿಖಾಮಣಿಯಲ್ಲಿ ಶ್ರೀರೇಣುಕಾಚಾರ್ಯರ ಉತ್ಪತ್ತಿಯನ್ನು ಬರೆಯುವಾಗ ಲಿಂಗಧಾರಣವನ್ನು ವರ್ಣಿಸದಿರುವಂತೆ ಪ್ರಭುಲಿಂಗಲೀಲೆಯಲ್ಲಿ ಯಾದರೂ ಅಲ್ಲಮನ ಲಿಂಗಧಾರಣವನ್ನು ವರ್ಣಿಸಿರುವದಿಲ್ಲವೆಂದು ಅಭಿಪ್ರಾಯಪಟ್ಟಿರುವಿ; ಕವಿಯು ಶ್ರೀಜಗದ್ಗುರು ರೇಣುಕಾಚಾರ್ಯರ ವಿಷಯದಲ್ಲಿ ಅಕಸ್ಮಾತ್ ಲಿಂಗಧಾರಣ ವರ್ಣನವನ್ನು ಬಿಟ್ಟಿದ್ದರೂ ವೀರಶೈವ ಮತಸ್ಥಾಪಕರಾದ ಆ ಪೂಜ್ಯಪಾದರಿಗೆ ಎಳ್ಳಷ್ಟು ಬಾಧೆಯಿಲ್ಲ! ಅದರಂತೆ ಅಲ್ಲಮನ ವಿಷಯದಲ್ಲಿ ಯಾದರೂ ಬಾಧೆಯು ಬರಲಾರದೆಂದು ಹೇಳಿದ್ದಾದರೆ ಸಮಂಜಸವಾಗುವದಿಲ್ಲ; ಯಾಕಂದರೆ– ಇವನು ಮೊದಲು ತಮ್ಮೂರಿಂದ ಕಲ್ಯಾಣಕ್ಕೆ ಬಂದು ಬಸವನ ಮನೆಯ ಭೋಜನಶಾಲೆಯಲ್ಲಿ ಹೊಕ್ಕಾಗ ಇವನ ಶರೀರದಲ್ಲಿ ಲಿಂಗಧಾರಣ ವಿದ್ದಿಲ್ಲವೆಂದೂ, ಕೋಡದ ಗಡಿಗೆ

ಯನ್ನು ಹಿಡಿದುಕೊಂಡಿದ್ದನೆಂದೂ, ಇವನ ಕೃತಿಯನ್ನು ನೋಡಿ ಊಟಕ್ಕೆ ಕುಳಿತವರಲ್ಲಿ ಅನೇಕ ಜನರು ಪಂಕ್ತಿಯನ್ನು ಬಿಟ್ಟು ಹೋದರೆಂದೂ ಕಾಡಸಿದ್ಧೇಶ್ವರ ವಚನದಿಂದ ತಿಳಿದು ಬರುತ್ತದೆ. ಅಲ್ಲದೆ ಈ ಅಲ್ಲಮನು ತನ್ನ ವಚನದಲ್ಲಿ- "ಕಟ್ಟಿದಾತ ಭಕ್ತನಪ್ಪನೇ ಕೆಡಹಿದಾತ ದ್ರೋಹಿಯಪ್ಪನೇ ಲಿಂಗವು ಕಟ್ಟಲಿಕ್ಕೆ ತನ್ನ ಕೈಯೊಳಗಿಪ್ಪುದೇ"|| ಎಂಬೀ ವಾಕ್ಯದಿಂದ ಲಿಂಗಧಾರಣವನ್ನು ನಿಷೇಧಿಸಿರುವನು. ಹಾಗೂ "ಹೊಟ್ಟೆಯಮೇಲೆ ಕಟ್ಟಿಕೊಂಡಿರುವ ವೊಟ್ಟೆಯು ಕಟ್ಟಿದರೇನು ಹಸಿವು ಹೋಪುದೇ ಅಂಗದಮೇಲೆ ಲಿಂಗಸ್ವಾಯತ್ತವಾದರೇನು ಭಕ್ತನಾಗಬಲ್ಲನೇ- ಇಟ್ಟಿಕಲ್ಲು ಮೆಳೆಯ ಮೇಲೆ ಸಿಕ್ಕಿದರೆ ಆಕಲ್ಲು ಲಿಂಗವೇ- ಆಮೆಳೆಯು ಭಕ್ತನೇ- ಇಟ್ಟಾತಗುರುವೇ- ಇಂತಪ್ಪವರ ಕಂಡರೆ ನಾನು ನಾಚುವೆನಯ್ಯ ಗುಹೇಶ್ವರ||" ಈ ವಚನದಿಂದಲೂ ಕೂಡ ಲಿಂಗಧಾರಣವನ್ನು ನಿಂದಿಸಿರುವನು ಈ ಯಾವತ್ತು ವಿಚಾರಗಳಿಂದ ಮೊದಲು ಇವನಿಗೆ ಲಿಂಗಧಾರಣ ವಿದ್ದಿಲ್ಲವೆಂದೂ, ಕಕ್ಕಯ್ಯ- ಹರಳಯ್ಯ- ಮಾಚಯ್ಯ ಮೊದಲಾದವರಂತೆ ಹಿಂದಿನಿಂದ ಇವನು ಲಿಂಗವನ್ನು ಧರಿಸಿಕೊಂಡಿರಬಹುದೆಂದೂ ಊಹಿಸಬೇಕಾಗುತ್ತದೆ. ಅಂಪಮೇಲೆ ಆದಿಯಲ್ಲಿ ಇವನು ಲಿಂಗಧಾರಣ ಸಹಿತನಾಗಿಯೇ ಹುಟ್ಟಿದನೆನ್ನುವ ಬಗೆಹ್ಯಾಗೆ? ಶ್ರೀರೇಣುಕಾಚಾರ್ಯರು ಕೊಲ್ಲಿಯ ಪಾಕಿಯ ಸೋಮನಾಥ ಲಿಂಗದಿಂದ ಲಿಂಗಧಾರಣ ಸಹಿತರಾಗಿಯೇ ಅವತರಿಸಿದರೆಂದು ಶ್ರೀರೇಣುಕವಿಜಯವು.

ಅಕಸ್ಮಾದೇತಸ್ಮಿನ್ ಪರಮಶಿವಲಿಂಗೇಽದ್ಭುತತಮಂ।
ಸಹಸ್ರಾರ್ಕಜ್ಯೋತಿಃ ಸಮುದಯಸದೃಕ್ಷಂ ಕಿಮಪಿಚ॥
ಸಮುದ್ಭೂತಂತೇಜಃ ಕಿಮಿದಮಿತಿ ಪಶ್ಯತ್ಸು ಸಕಲೇ।
ಷ್ವಸೌ ತಸ್ಮಾಲ್ಲಿಂಗಾತ್ಸಮುದಭವದಬ್ಧೇರ್ವಿಧುರಿವ॥ ೧೯॥

ಕಂಥಾಸ್ಯೈವ ಹರಿನ್ಮಯಿಾ ನಿಟಲದೃಕ್ ಸೈವಾತ್ರ ಸಂವಿಸ್ತೃತಾ।
ದೀರ್ಘಾಸ್ಯೈವ ಜಟಾತದೇವ ಧವಲಂ ಭಸ್ಮತ್ರಿಪುಂಡ್ರಾಂಕನಂ||
ಹಸ್ತಾಬ್ಜಂಚ ತದೇವದಂಡಲಸಿತಂ ಲಿಂಗಾಂಕಿತಂ ಮಸ್ತಕಂ|
ತಾದೃಕ್ತಾದೃಶವಜ್ರಕುಂಡಲಮಭೂತ್ಪ್ರಾಗ್ಯಾದೃಶಂ ರೇಣುಕೇ॥ ೨೧||

ಇತ್ಯಾದಿ ಶ್ಲೋಕಗಳಿಂದ ಉದ್ಘೋಷಿಸುತ್ತದೆ. ಹೀಗಿದ್ದು ಅಲ್ಲಮನ ವಿಷಯದಲ್ಲಿ ರೇಣುಕಾಚಾರ್ಯರ ದೃಷ್ಟಾಂತವನ್ನು ತೆಗೆದುಕೊಂಡಿರುವದು. ಅತ್ಯಂತ ಅನ್ಯಾಯವು!

(೧೪೯-೧೫೦-ಉ-ವಿ.) ಅಲ್ಲಮನು ತನ್ನ ವಚನದಲ್ಲಿ- ಯಾವ ಜಾತಿಯವನೇ ಇರಲಿ ಅವನ ಎಂಜಲವನ್ನು ನಾನು ತಿನ್ನುವೆನೆಂದು ಅಂದುಕೊಂಡಿರುವನು. ಈ ಪ್ರಕಾರವಾದ ಬೀಭತ್ಸವಾಕ್ಯವನ್ನು ನಿಜವಾದ ವೀರಶೈವರು ಎಂದಾದರೂ ಅಂದುಕೊಳ್ಳ

ವರೋ ಹೇಗೆ ? ಎಂದು ಕೇಳಿದ ಪ್ರಶ್ನಕ್ಕೆ—"ಯಾರು ಸಮಜ್ಞಾನ- ಸಮಕ್ರಿಯಾ-ಸಮ ಸಂಸ್ಕಾರ ಸಂಪನ್ನರಾಗಿರುವರೋ ಅವರು ಮೊದಲು ಯಾವ ಜಾತಿಯವರಾಗಿದ್ದರೂ ಆ ಮಹಾ ಶಿವಯೋಗಿಗಳ ಎಂಜಲ (ಪ್ರಸಾದ) ವನ್ನು ಸೇವಿಸುತ್ತೇವೆಂದು ಅಂದು ಕೊಂಡಿರುವರು." ಎಂದು ಬರೆದಿರುವಿ. ಕಂಡ ಕಂಡ ಜಾತಿಯವರಿಗೆ ಶುದ್ಧ ವೀರಶೈವ ಸಂಸ್ಕಾರಗಳಾಗುವದಿಲ್ಲವೆಂದು ೮೬ ನೆಯ ವಿಮರ್ಶದಲ್ಲಿ ಸ್ಪಷ್ಟೀಕರಿಸಿದೆ. ನೋಡು ! ಇವನು ನಿಜವಾದ ವೀರಶೈವನಾಗಿದ್ದರೆ ಕಂಡ ಕಂಡ ಜಾತಿಯವರ ಎಂಜಲವನ್ನು ತಿನ್ನುತ್ತೇನೆಂದು ಎಂದಿಗೂ ಆಡುತ್ತಿರಲಿಲ್ಲ ಅಂದಮೇಲೆ ಇವನು ನಿಜವಾದ ವೀರಶೈವನಾಗಬಹುದೇ ಹೇಗೆ. ಎಂಜಲಕ್ಕೆ ನೀನು ಪ್ರಸಾದವೆಂದು ಅಂದುಕೊಂಡು ಪ್ರಸಾದ ಮಹಿಮಾಪರ ಶ್ಲೋಕಗಳನ್ನು ಉದಾಹರಿಸಿರುವಿ ಯಷ್ಟೆ! ಆದರೆ ಆ ಶ್ಲೋಕಗಳನ್ನು ಸರ್ವರೂ ಬಲ್ಲರು ! ಅವು ಅಲ್ಲಮನ ವಚನಕ್ಕೆ ಪುಷ್ಟಿಯನ್ನು ಕೊಡುವದಿಲ್ಲವೆಂದು ತಿಳಿ !

(೧೫೧-ಉ-ವಿ.) "ಜಂಗಮ ಜಗದ್ಭರಿತ ದೇವನು" ಎಂಬ ವಚನವು ಕಾಡಸಿದ್ಧೇಶ್ವರ ವಚನದಲ್ಲಿದ್ದಾಗ್ಯೂ ಅದರಲ್ಲಿಲ್ಲವೆಂದು ಬರೆದಿರುವಿ. ಕಾಡಸಿದ್ಧೇಶ್ವರ ವಚನಗಳು ಅನೇಕ ಕಡೆಗೆ ದೊರಕುತ್ತವೆ. ನೋಡು ! ನಿನ್ನ ಕಾಡಸಿದ್ಧೇಶ್ವರ ವಚನವು ಎಂಥದೋ ತಿಳಿಯದು ! ಆ ಪ್ರಶ್ನಕ್ಕೆ ಉತ್ತರವನ್ನು ಕೊಡಲು ಸಮರ್ಥನಾಗದ ನೀನು ಆ ವಚನವೇ ಇರುವದಿಲ್ಲವೆಂದು ಬರೆದಿರುವದು ಕುಕಲ್ಪನವೇ ಸರಿ ! "ಪ್ರಭುವು ಭವಿಯಾಗಿ ಬಂದರೆ ಭಕ್ತರು ತಮ್ಮಂಗದ ಮೇಲಿನ ಲಿಂಗವ ನೂಗೆಯಲು ಕಾರಣವೇನು ? ಎಂದು ಪ್ರಶ್ನ ಮಾಡಿರುವಿ ; ಇದನ್ನು ಚನ್ನಾಗಿ ತಿಳಿದುಕೊಳ್ಳು ! ಬಸವನು ಅನೇಕ ಜಾತಿಯವರಿಗೆ ಲಿಂಗವನ್ನು ಕಟ್ಟಿ ನೂತನವಾದ ತನ್ನ ಸಂಕರ ಜಾತಿಯಲ್ಲಿ ಅವರನ್ನು ತೆಗೆದುಕೊಂಡಿದ್ದನು. ನೂತನ ಲಿಂಗಧಾರಿಗಳೆಲ್ಲರು ಅವನ ಮನೆಯಲ್ಲಿ ಊಟಕ್ಕೆ ಕುಳಿತುಕೊಂಡಾಗ ಅಲ್ಲಮನು ಆ ಪಂಕ್ತಿಯಲ್ಲಿ ಹೊಂಡದ ಗಡಿಗೆಯನ್ನು ತೆಗೆದುಕೊಂಡು ಬರಲು ಅವರು ಅಸಹ್ಯ ಪಟ್ಟು ಶಿವ- ಶಿವಾ- ಈ ಮತವು ನಮಗೆ ಬೇಡವೆಂದು ತಾವು ಕಟ್ಟಿಕೊಂಡ ಲಿಂಗಗಳನ್ನೊಗೆದು ತಮ್ಮ ತಮ್ಮ ಪೂರ್ವಜಾತಿಯಲ್ಲಿ ಸೇರಿಕೊಂಡರು. ಈ ವಿಷಯದಲ್ಲಿ ಆ ವಚನವೇ ಸಾಕ್ಷಿಯು ! ಅವರು ಲಿಂಗಗಳನ್ನು ಒಗೆದು ಹೋಗುವದಕ್ಕೆ ಅಲ್ಲಮನ ಅಸಹ್ಯ ಕೃತಿಯೇ ಮೂಲ ಕಾರಣವು ! ಈಗ್ಯೂ ಕಾಡ ಎಷ್ಟೋ ಜನರು ಆರ್ಯಸಮಾಜ- ಕ್ರಿಶ್ಚಿಯನ್ ಸಮಾಜಗಳಲ್ಲಿ ಸೇರುತ್ತಾರೆ. ಆ ಧರ್ಮಗಳಲ್ಲಿ ತಮಗೆ ಅಸಹ್ಯಬುದ್ಧಿಯು ಹುಟ್ಟಿದರೆ ಆ ಧರ್ಮಗಳನ್ನು ಬಿಟ್ಟು ತಮ್ಮ ಪೂರ್ವಜಾತಿಗಳಲ್ಲಿ ಸೇರುತ್ತಾರೆ. ಅದರಂತೆ ಬೇರಾದ ಜನರು ಲಿಂಗವನ್ನು ಒಗೆದು ಹೋದರೂ ಹೋಗಿರಬಹುದು ! ಇದರಲ್ಲೇನಾಶ್ಚರ್ಯವು ?

(೧೫೨--ಉ-ವಿ.) ಅನ್ಯನೆಂದ ಪಕ್ಷದಲ್ಲಿ ಇವನು ವೀರಶೈವರಿಗೆ ಮಾನ್ಯನು ಹೇಗೆ ಆಗುವನು ? ಎಂದು ಪ್ರಶ್ನ ಮಾಡಿದ್ದಕ್ಕೆ— ವೀರಶೈವನಾದ ಕಾರಣ ವೀರಶೈವರಿಗೆ ಮಾನ್ಯನಾ

ಗುವನೆಂದು ಬರೆದಿರುವಿ. ಅಲ್ಲಮನು ವೀರಶೈವನಿದ್ದನೆಂದು ಹೇಳಲಿಕ್ಕೆ ಬಾರದಿರುವದರಿಂದಲೂ ಬಾಗಲಕೋಟೆಯಲ್ಲಿ ನೆರವೇರಿದ ವೀರಶೈವ ಮಹಾ ಸಭೆಯಲ್ಲಿ ಅಲ್ಲಮನನ್ನು ಮತಾಂತರದವನಿದ್ದನೆಂದು ಒಂದು ಲೇಖವು ಪಾಸಾಗಿರುವದರಿಂದಲೂ ಇವನು ಶುದ್ಧ ಸಾಂಪ್ರದಾಯದ ವೀರಶೈವರಿಗೆ ಮಾನ್ಯನಾಗುವನೆಂದು ಹೇಳಲಿಕ್ಕಾಗುವದಿಲ್ಲ!

(೧೫೩–೧೫೪--ಉ–ವಿ.) ಅಲ್ಲಮನು "ಬಳಗಾಂವಿ" ಎಂಬ ಗ್ರಾಮದಲ್ಲಿ **ಸುಜ್ಞಾನಾಂಬಾ** ಹಾಗೂ **ನಿರಹಂಕಾರ** ಎಂಬ ದಂಪತಿಗಳ ಪ್ರಾರ್ಥನಾನುಸಾರವಾಗಿ ಅವರಿಗೆ ಮಗನಾಗಿ ಜನಿಸಿದನೆಂದು ಪ್ರಭುಲಿಂಗಲೀಲೆಯಲ್ಲಿ ಬರೆದಿರುತ್ತದೆ. ಆದರೆ ಇವನು ಅವರ ಉದರದಿಂದ ಜನಿಸಿದನೋ ಅಥವಾ ಹಾಗೆಯೇ ಜನಿಸಿದನೋ? ಎಂದು ಪ್ರಶ್ನೆ ಮಾಡಿದ್ದಕ್ಕೆ– "ಅಲ್ಲಮನು ಈ ದಂಪತಿಗಳ ಪ್ರಾರ್ಥನಾನುಸಾರವಾಗಿ ಕೇವಲ ತನ್ನ ಇಚ್ಛಾಶಕ್ತಿಯಿಂದಲೆ ಭೂತಕಾಯುವನ್ನು ತಾಳಿ ಅವರಿಗೆ ಮಗನಾಗಿ ಅವತರಿಸಿದನಲ್ಲದೆ ಅವರ ರಕ್ತರೇತಃ ಸಂಬಂಧದಿಂದ ಅವರ ಉದರದಿಂದ ಹುಟ್ಟಲಿಲ್ಲವೆಂದರೆ ಇವನು ಹೇಗೆ ಹುಟ್ಟಿದನು? ಬೆನ್ನಿನಿಂದ ಹುಟ್ಟಿದನೊ? ಭೂಮಿಯಿಂದೆದ್ದನೋ? ಆಕಾಶದಿಂದಲೇ ಬಿದ್ದನೋ? ಅಥವಾ ಮತ್ತಾವ ರೀತಿಯಿಂದಾದರೂ ಹುಟ್ಟಿದನೋ? ಎನ್ನುವದನ್ನು ಸ್ಪಷ್ಟವಾಗಿ ಬರೆದಿದ್ದರೆ ಉತ್ತಮವಾಗುತ್ತಿತ್ತಲ್ಲವೇ? ಹಾಗೆ ಸ್ಪಷ್ಟವಾಗಿ ಬರೆಯದೆ ಸುಮ್ಮನೆ ಉದರದಿಂದ ಮಾತ್ರ ಹುಟ್ಟಲಿಲ್ಲವೆಂದರೆ ಯಾರಾದರೂ ನಂಬುವರೋ?

(೧೫೫–೧೫೬–ಉವಿ.) ಅಲ್ಲಮನ ತಾಯಿತಂದೆಗಳಾದ **ಸುಜ್ಞಾನಾಂಬಾ** ಹಾಗೂ **ನಿರಹಂಕಾರ** ಎಂಬವರ ನಾಮಗಳು ಅನ್ವರ್ಥಕಗಳಾಗಿದ್ದವೆಂದು ಬರೆದಿರುವಿ ಯಷ್ಟೆ! ಅಂದಮೇಲೆ ಇವನ ತಂದೆಯು ತನ್ನ ನಾಮಕ್ಕನುಸಾರವಾಗಿ ಅಹಂಕಾರ ಶೂನ್ಯನಾಗಿದ್ದರೆ ನನಗೆ ಪುತ್ರನು ಬೇಕೆಂಬ ಮಮಕಾರ ಬುದ್ಧಿಯಿಂದ ತಪಸ್ಸನ್ನೇಕೆ ಮಾಡಿದನು? ಇವನು ಮಮಕಾರದಿಂದ ಕೂಡಿದ ಕಾರಣ ಇವನಿಗೆ ಅಹಂಕಾರವಿತ್ತೆಂದು ಸಿದ್ಧವಾಗುತ್ತದೆ. ಆದ್ದರಿಂದ ಇವನ ಹೆಸರು ಅನ್ವರ್ಥಕವಾಗಲಾರದು!

(೧೫೭–ಉ–ವಿ.) ಅವರ ನಾಮಗಳು ಅನ್ವರ್ಥಕಗಳಾಗಿದ್ದವೆಂದರೆ ಅವರು ತಮ್ಮ ನಾಮಕ್ಕನುಸಾರವಾಗಿ ಭಯಂಕರವಾದ ಕಾನನದಲ್ಲಿ ವಾಸ ಮಾಡಬೇಕಾಗಿತ್ತಲ್ಲವೇ? ಹಾಗೆ ಮಾಡದೆ ಅರಮನೆಯಲ್ಲೇಕೆ ವಾಸ ಮಾಡುತ್ತಿದ್ದರು? ಎಂದು ಪ್ರಶ್ನೆ ಮಾಡಿದ್ದಕ್ಕೆ– ಜನಕಾದಿಗಳ ದೃಷ್ಟಾಂತವನ್ನು ತೆಗೆದುಕೊಂಡು ಅವರಂತೆ ಅಲ್ಲಮನ ತಂದೆ ತಾಯಿಗಳು ಜ್ಞಾನಿಗಳಿದ್ದರೆಂದೂ, ಅರಮನೆಯಲ್ಲಿವಾಸ ಮಾಡಿದ್ದು ವಿಹಿತವೆಂದೂ ಅಭಿಪ್ರಾಯ ಪಟ್ಟಿರುವಿ; ಇವರಿಗೆ ಜನಕಾದಿಗಳ ದೃಷ್ಟಾಂತಗಳು ಸಂಗತವಾಗುವದಿಲ್ಲ. ಯಾಕಂದರೆ– ಜನಕನು ಜೀವನ್ಮುಕ್ತನಾಗಿದ್ದನು; ಅರಮನೆಯಾದರೂ ಅವನಿಗೆ ಅರಣ್ಯದಂತೆಯೇ ಇತ್ತು; ಅವನು ಈಷಣಾತ್ರಯದಿಂದ ದೂರನಾಗಿದ್ದನು. ಈ ವಿಷಯುವನ್ನು

ಶುಕಜನಕ ಸಂವಾದದಲ್ಲಿನೋಡು. ಆ ಜನಕನಂತೆಯೇ ಇವನಾದರೂ ತನ್ನ ಅರ ಮನೆಯನ್ನು ಅರಣ್ಯದಂತೆ ತಿಳಿಯುತ್ತಿದ್ದನೆಂದೂ, ಈಷಣಾತ್ರಯದಿಂದ ದೂರನಾಗಿದ್ದ ನೆಂಬೂ ಅಂದದ್ದಾದರೆ ಇವನು ಪುತ್ರನ ಸಲುವಾಗಿ ಘೋರವಾದ ತಪಸ್ಸನ್ನು ಮಾಡಿದ ನೆಂದು ಪ್ರಭುಲಿಂಗಲೀಲೆಯಲ್ಲಿ ಬರೆದಿರುವ ಕಾರಣ ಇವನಿಗೆ **ಪುತ್ರೇಷಣೆಯು** ಇದ್ದಿಲ್ಲವೆನ್ನುವ ಬಗೆಹೇಗೆ ? ಆದ್ದರಿಂದ ಜನಕಾದಿಗಳ ದೃಷ್ಟಾಂತವು ಇವನಿಗೆ ಸಂಬಂಧ ವಾಗುವದಿಲ್ಲ. ನಿಜವಾದ ಜ್ಞಾನಿಗಳಿಗೆ ಅರಣ್ಯವಾಸವೇ ಉಕ್ತವಾಗಿರುವದು. ಶ್ರೀರೇ ಣುಕಾದಿ ಭಗವತ್ಪಾದರು ಘೋರವಾದ ಅರಣ್ಯದಲ್ಲಿಯೇ ತಮ್ಮ ವಾಸಸ್ಥಲಗಳನ್ನು ಮಾಡಿ ಕೊಂಡಿರುತ್ತಾರೆ. ಈಗ್ಯೂ **ರಂಭಾಪುರೀ ಪೀಠವೂ, ಕೇದಾರಪೀಠವೂ, ಶ್ರೀ ಶೈಲಪೀಠವೂ**, ಘೋರವಾದ ಅರಣ್ಯದಲ್ಲಿಯೇ ಇರುತ್ತವೆ ; **ಕಾಶೀಪೀಠ**ವಾದರೂ ಪೂರ್ವದಲ್ಲಿ **ನಂದನವನ**ದಲ್ಲಿಯೇ ಇತ್ತೆಂದು ದಾನಶಾಸನಗಳಲ್ಲಿ ಉಲ್ಲೇಖವಿರುತ್ತದೆ. ಈನಂದನವನದ ವರ್ಣನವನ್ನು ವ್ಯಾಸಮಹರ್ಷಿಯು **ಕಾಶೀಖಂಡ**ದಲ್ಲಿ ಮಾಡಿದ್ದಾನೆ. ನೋಡು ! ಕೆಲವು ಕಾಲದಿಂದ ಆಕ್ಷೇತ್ರವು ಹಬ್ಬುತ್ತ ನಡೆದಿರುವದರಿಂದ ಆ ನಂದನವನವು ಪಟ್ಟಣವಾಗಿ ಹೋಗಿದೆ. ಇನ್ನು **ಉಜ್ಜಯನೀಪೀಠ**ವಾದರೂ ಪೂರ್ವದಲ್ಲಿ ಘೋರ ವಾದ ಅರಣ್ಯದಲ್ಲಿಯೇ " **ವಟಕ್ಷೇತ್ರ** " ಎಂಬ ಹೆಸರಿನಿಂದ ಪ್ರಸಿದ್ಧವಾಗಿತ್ತು ; ಕೆಲವು ಕಾಲದಿಂದೀಚೆಗೆ ಗ್ರಾಮವಾಗಿ ಪರಿಣಮಿಸಿದೆ. ಪೀಠಾಧಿಪತಿಗಳಾದ ಜಗದ್ಗುರುಗಳು ಲೋಕೋದ್ಧಾರಕ್ಕಾಗಿ ಜ್ಞಾನೋಪದೇಶ ಗೈಯ್ಯಲು ದೇಶದೇಶಗಳಲ್ಲಿ ದಿಗ್ವಿಜಯ ಮಾಡು ವವರಾದ ಕಾರಣ ಇವರು ಮಹಾ ಜ್ಞಾನಿಗಳಿರುತ್ತಾರೆಂದು ತಿಳಿ ! ಗ್ರಾಮಗಳಲ್ಲಿರತಕ್ಕ ಜನರು **ನನ್ನಹೊಲ– ನನ್ನಮನೆ– ನನ್ನಹೆಂಡರು– ನನ್ನಮಕ್ಕಳು– ಸರ್ವವೂ ನನ್ನದು– ನನ್ನದು**– ಎಂಬ ಮಾಯಾ ಮಯವಾದ ಅಜ್ಞಾನದಿಂದ ಕೂಡಿದ ವರಾದ ಕಾರಣ ಇವರಿಗೆ ಶಾಸ್ತ್ರಾನುಸಾರವಾಗಿ ಜ್ಞಾನಾತಿರಿಕ್ತರೆಂದೇ ಹೇಳಬೇಕಾಗು ತ್ತದೆ. ಆದ್ದರಿಂದ ಗ್ರಾಮವಾಸಿಗಳಾಗಿ ಈಷಣಾತ್ರಯದಿಂದ ಯುಕ್ತರಾದ ಅಲ್ಲಮನ ತಾಯಿತಂದೆಗಳಿಗೆ ಜ್ಞಾನಿಗಳೆಂದು ಹೇಳಲಿಕ್ಕಾಗುವದಿಲ್ಲ.

(೧೫೪–ಉ–ವಿ.) ಅಲ್ಲಮನಿಗೆ ಹುಟ್ಟಿದ ಕೂಡಲೆ " ಅಲ್ಲಮ " ಎಂಬ ಹೆಸ ರನ್ನು ಯಾರು ಇಟ್ಟರೆಂದು ಕೇಳಿದ್ದಕ್ಕೆ– ಅವನ ತಂದೆ ತಾಯಿಗಳಿಟ್ಟರೆಂದು ಉತ್ತರವನ್ನು ಬರೆದಿರುವಿ. ಇದೊಂದು ಮಾತ್ರ ಸರಿಯಾದ ಉತ್ತರವು !

(೧೫೯–೧೬೦–ಉ–ವಿ.) " **ಅಲ್ಲಮ** " ಎಂಬ ಶಬ್ದವು ಅರಬ್ಬೀ ಭಾಷೆಯು ದಿದ್ದಾಗ್ಯೂ ದುರಭಿಮಾನಿಯಾದ ನೀನು ಆಶಬ್ದವು ಸಂಸ್ಕೃತಭಾಷೆಯದೇ ಎಂದು ಬಹಳ ಕಷ್ಟಪಟ್ಟು ಸಿದ್ಧ ಮಾಡಿರುವಿ ; ಕ್ಲಿಷ್ಟಕಲ್ಪನೆಯಿಂದ ಸಾಧಿಸಹೋದರೆ ಯಾವ ಭಾಷೆಯ ಶಬ್ದಗಳು ಸಂಸ್ಕೃತ [illegible] " **ಹಜರತ** "

ಈ ಶಬ್ದಗಳು ಮುಸಲ್ಮಾನೀ ಭಾಷೆಯವಷ್ಟೆ! ಈ ಶಬ್ದಗಳನ್ನು ನಿನ್ನಷ್ಟು ಕಷ್ಟಪಡದೆ ಸುಗಮ ರೀತಿಯಿಂದ ಸಂಸ್ಕೃತದಲ್ಲಿ ಸಾಧಿಸುತ್ತೇವೆ. ನೋಡು! ಮೊದಲು "ಖಾಸೀಮ" ಶಬ್ದದ ವ್ಯುತ್ಪತ್ತಿಯನ್ನು ಮಾಡೋಣ! "ಸೀಮಾ ನಾಮ ಮರ್ಯಾದಾ= ಪರಿಚ್ಛೇದ ಇತ್ಯರ್ಥಃ। ನ- ಸೀಮಾ- ಅಸೀಮಾ= ಪರಿಚ್ಛೇದರಾಹಿತ್ಯಮಿತ್ಯರ್ಥಃ। ಖಮಿವ- ಗಗನಮಿವ- ಅಸೀಮಾ ಯಸ್ಯ ಸಃ- ಖಾಸೀಮಃ- ಪರಮಾತ್ಮೇತ್ಯರ್ಥಃ॥ "ಆಕಾಶವತ್ಸರ್ವಗತಶ್ಚ ನಿತ್ಯಃ" 'ಸತ್ಯಂ ಜ್ಞಾನಮನಂತಂ ಬ್ರಹ್ಮ" ಇತ್ಯಾದಿಶ್ರುತೇಃ। ಈ ಪ್ರಕಾರವಾಗಿ ವ್ಯುತ್ಪತ್ತಿಯನ್ನು ಮಾಡಿಕೊಳ್ಳುವದರಿಂದ "ಖಾಸೀಮ" ನೆಂದರೆ ಆಕಾಶದಂತೆ ಪರಿಚ್ಛೇದ ರಹಿತನಾದ ಪರಮಾತ್ಮನೆಂದು ಅರ್ಥವಾಗುತ್ತದೆ. ಇನ್ನು "ಹಜರತ" ಶಬ್ದದ ವ್ಯುತ್ಪತ್ತಿಯನ್ನು ಮಾಡೋಣ! "ಹಃ- ಶಿವಃ- ತಸ್ಮಾಜ್ಜಾಯತ ಇತಿ ಹಜಃ= ಕುಮಾರಃ- ತಸ್ಮಿನ್ ರತಃ- ಆಸಕ್ತಃ= ಹಜರತಃ- ಷಣ್ಮುಖಭಕ್ತ ಇತ್ಯರ್ಥಃ। ಈ ವ್ಯುತ್ಪತ್ತಿಯಿಂದ "ಹಜರತ" ಎಂದರೆ ಷಣ್ಮುಖನ ಭಕ್ತನೆಂದು ಅರ್ಥವಾಗುತ್ತದೆ. ಹಃ ಕೋಪೇ ವಾರಣೇ ಹಸ್ತೇ ತಥಾ ಶೂಲೀ ಪ್ರಕೀರ್ತಿತಃ॥" ಇತ್ಯೇಕಾಕ್ಷರ ಕೋಶವು! ಈ ಪ್ರಕಾರವಾಗಿ "ಖಾಸೀಮ" ಹಾಗೂ "ಹಜರತ" ಎಂಬ ಶಬ್ದಗಳನ್ನು ಸಂಸ್ಕೃತದಲ್ಲಿ ಸಿದ್ಧ ಮಾಡಲಾಗಿ ನೀನು ತೋರಿಸಿರುವ "ಅಲ್ಲಮ" ಶಬ್ದದ ವ್ಯುತ್ಪತ್ತಿಯ ಅರ್ಥಕ್ಕಿಂತಲೂ ಸಾವಿರಪಟ್ಟು ಮಿಗಿಲಾದ ಅರ್ಥವನ್ನು ಕೊಡುತ್ತವೆ. ಹೀಗಿದ್ದಾಗ್ಯೂ ಈ ಶಬ್ದಗಳನ್ನು ಸಂಸ್ಕೃತ ಶಬ್ದಗಳೆಂದು ಹೇಳುವದು ಅನ್ಯಾಯವಲ್ಲವೇ? ಅದರಂತೆ ನೀನಾದರೂ "ಅಲ್ಲಮ" ಶಬ್ದವನ್ನು ಸಂಸ್ಕೃತದಲ್ಲಿ ಸಾಧಿಸಿರುವದು ಕೇವಲ ದುರಾಗ್ರಹವಲ್ಲದೆ ಬೇರೊಂದಿಲ್ಲ! ಸಂಸ್ಕೃತ ಭಾಷೆಯಲ್ಲಿ ಸ್ವಲ್ಪ ತಿಳುವಳಿಕೆ ಇರುತ್ತದೆಂದು ಮನಸ್ಸಿಗೆ ಬಂದಂತೆ ವ್ಯುತ್ಪತ್ತಿಯನ್ನು ಮಾಡಿಕೊಂಡು ಅಮಾರ್ಗವನ್ನು ತುಳಿಯುವದು ವಿವೇಕಿಗಳ ಲಕ್ಷಣವಲ್ಲ!

(೧೬೧-೧೬೨-ಉ-ವಿ.) ಪ್ರಭುಲಿಂಗಲೀಲೆಯಲ್ಲಿ "ಅಲ್ಲಮ- ಅಲ್ಲಮಾ- ಅಲ್ಲಮಾಪ್ರಭು- ಅಲ್ಲಮಪ್ರಭು- ಅಲಂಮಾ- ಅಲಂಮಾಪ್ರಭು" ಹೀಗೆ ಮನಸ್ಸಿಗೆ ಬಂದಂತೆ ಪ್ರಯೋಗಗಳಿರುತ್ತವೆ. ಇಷ್ಟು ಅಸಂಗತಗಳನ್ನಾಗಿ ಉಲ್ಲೇಖಿಸಲಿಕ್ಕೆ ಕಾರಣವೇನೆಂದು ಪ್ರಶ್ನ ಮಾಡಿದ್ದಕ್ಕೆ- ಈ ಯಾವತ್ತು ಶಬ್ದಗಳು ಸಂಸ್ಕೃತ ಭಾಷೆಯವೆಂದು ಹೇಳಿ ಅಲ್ಲಮನ ವಿಷಯದಲ್ಲಿ ಅರ್ಥ ಮಾಡಿಕೊಂಡಿರುವದನ್ನು ನೋಡಿದರೆ ಸ್ವಮತದ ಪಂಡಿತರಾಗಲಿ ಅಥವಾ ಪರಮತದ ಪಂಡಿತರಾಗಲಿ ಬಿದ್ದು ಬಿದ್ದು ನಗದೆ ಇರಲಾರರು.! "ಅಲಂ-ಮಾ" ಅಂದರೆ "ಸಾಕು-ಬೇಡ" ಎಂದು ಅರ್ಥವನ್ನು ತೋರಿಸುವ ಎರಡು ಅವ್ಯಯಗಳಿಂದ "ಅಲಂಮಾ" ಶಬ್ದವಾಯಿತೆಂದು ಬರೆದಿರುವಿ: ವರ್ಣಾಶ್ರಮ ಧರ್ಮಗಳು ಸಾಕು; ಎಂದರೆ ತೀರಿಹೋಗುತ್ತಿತ್ತು; ಪುನಃ ಬೇಡವೆನ್ನು

ವನು ಯಾಕೆ ಬೇಕಾಗಿತ್ತು ? ದಡ್ಡಾ – ಹೀಗೆ ಬರೆದರೆ ಪಂಡಿತರು ಛೀ ಅಂದಾರೆಂಬ ಭಯ
ವಾದರೂ ಉತ್ಪನ್ನವಾಗಲಿಲ್ಲವೇ ? ಈ ಸಂದರ್ಭದಲ್ಲಿ " ಉಮಾ " ಶಬ್ದದ ದೃಷ್ಟಾಂತ
ವನ್ನು ಕೊಟ್ಟಿರುವಿ ; ಇದು ಕೇವಲ ಅಸಂಗತವು ! ಯಾಕಂದರೆ– ಕಾಳಿದಾಸನು ತನ್ನ
ಬುದ್ಧಿಯ ಚಮತ್ಕೃತಿಯನ್ನು ತೋರಿಸುವದಕ್ಕೋಸ್ಕರ " ಉಮಾ " ಶಬ್ದದ ಬಗ್ಗೆ
ಹಾಗೆ ಅರ್ಥವನ್ನು ಮಾಡಿರುವನಲ್ಲದೆ ಬೇರೊಂದಿಲ್ಲ ! ' ಅವತೀತ್ಯುಮಾ " ಎಂಬ
ಉಮಾ ಶಬ್ದದ ಪ್ರಸಿದ್ಧವಾದ ವ್ಯುತ್ಪತ್ತಿಯೇ ಇರುತ್ತದೆ. ಹಾಗೂ " ಓ– ಮಹೇ
ಶಸ್ಯ– ಮಾ– ಲಕ್ಷ್ಮೀಃ= ಉಮಾ | ಎಂದು ಬೇರೊಂದು ರೀತಿಯಾದ ವ್ಯುತ್ಪತ್ತಿಯು
ರಾಮಾಶ್ರಮಿ ಟೀಕೆಯಲ್ಲಿ ಮಾಡಲ್ಪಟ್ಟಿರುತ್ತದೆ ಇದರಂತೆ " ಅಲಂಮಾ " ಮೊದ
ಲಾದ ಶಬ್ದಗಳಿಗೆ ಸರಿಯಾದ ವ್ಯುತ್ಪತ್ತಿಯಿದ್ದರೆ ತೋರಿಸು ! ಇರಲಿ ; ಪ್ರಭುಲಿಂಗಲೀ
ಲೆಯ ೩ ನೆಯ ಅಧ್ಯಾಯದ ೧೦೦ ನೆಯ ಶ್ಲೋಕದಲ್ಲಿ ಅಲ್ಲಮನಿಗೆ " ಅಲ್ಲಮಾ–
ಅಲ್ಲಮಾ– " ಎಂದು ಅನ್ನುತ್ತಿದ್ದರೆಂಬ ಸ್ಪಷ್ಟವಾಗಿ ಬರೆದಿರುತ್ತದೆ. ನೀನು ಈ ಶಬ್ದ
ಕ್ಕಾದರೂ ವ್ಯುತ್ಪತ್ತಿಯನ್ನು ಮಾಡಿ ಅಲ್ಲಮನ ವಿಷಯದಲ್ಲಿ ಯಾಕೋ ಅರ್ಥವನ್ನು
ಮಾಡಿಲ್ಲ ; ಇದು ಜಗತ್ತಿನ ಸುದೈವವೆಂದೇ ಭಾವಿಸಬೇಕಾಗುತ್ತದೆ. " ಅಲ್ಲಮಾ "
ಎಂದರೆ " ಪಾರ್ವತಿಯು " ಎಂದು ಅರ್ಥವನ್ನು ಬರೆದಿರುವಿಯಷ್ಟೆ ! ಈ ಅಲ್ಲಮಾ
ಶಬ್ದವು ಪಾರ್ವತಿಯ ಅರ್ಥವನ್ನು ಕೊಡುತ್ತದೆಂದು ಬರೆದ ಮೇಲೆ " ಅಲ್ಲಮಾ "
ಶಬ್ದವಾಚ್ಯನಾದ ಅಲ್ಲಮನಿಗೆ ಪಾರ್ವತಿಯೆಂದು ಅರ್ಥಮಾಡಬೇಕೇ ಹೇಗೆ ! ಇಷ್ಟು ಸಹ
ಪೂರ್ವಾಪರ ವಿಚಾರವಿಲ್ಲನೆಂದ ಮೇಲೆ ಮಾಡುವದೇನು ! ಇದು ನಿನ್ನ ಅಜ್ಞಾನದ ಪ್ರಭಾ
ವವೇ ಸರಿ ! ' ಅಲ್ಲಮಾಪ್ರಭು " ಎಂದರೆ ಪಾರ್ವತಿಯು ನಿಗ್ರಹಾನುಗ್ರಹಗಳಿಗೆ ಕಾರ
ಣನೆಂದು ಅರ್ಥವನ್ನು ಬರೆದಿರುವಿ , ಜಗನ್ಮಾತೆಯಾದ ಪಾರ್ವತೀದೇವಿಯು ನಿಗ್ರಹಾನು
ಗ್ರಹಗಳಿಗೆ ಪರಮಾತ್ಮನನ್ನು ಬಿಟ್ಟು ಉಳಿದವರು ಯಾರೂ ಕಾರಣರಾಗಲಾರರು ! ಹೀಗಿ
ದ್ದು ಅಲ್ಲಮನು ಕಾರಣನಾಗುತ್ತಾನೆಂದು ಬರೆಯಲು ಮನಸ್ಸಿಗೆ ಹೇಯವೆನಿಸಲಿಲ್ಲವೇ ?
" ಪ್ರಭು " ಎಂಬ ಶಬ್ದವು ಪತಿಯ ಅರ್ಥದಲ್ಲಿರುತ್ತದೆ. ಅಮರಕೋಶವನ್ನು
ನೋಡು ! ಅಂದಮೇಲೆ " ಅಲ್ಲಮಾಪ್ರಭು " ಎಂದರೆ ಪಾರ್ವತಿಯ ಗಂಡನೆಂದು
ಅರ್ಥವಾಗಲಿಲ್ಲವೇ ? ಶಿವ ! ಶಿವ ! ಎಂಥ ಘೋರ ಪಾಪ ಕೃತ್ಯವಿದು ? ದುರಭಿಮಾನ
ದಿಂದ ಸಾಧಿಸಹೋದರೆ ಇಷ್ಟು ವಿಪರೀತವಾಗುತ್ತದೆ. ಆದಕಾರಣ ಎಲೋ ಲೇಖ
ಕನೇ ದುರಭಿಮಾನದಿಂದ ಸಾಧಿಸಲಿಕ್ಕೆ ಹೋಗಿ ದೊಡ್ಡ ಪಾಪವನ್ನು ಗಳಿಸಿಕೊಂಡಿರುವ
ನೀನು ಪ್ರಾಯಶ್ಚಿತ್ತವನ್ನು ಹೊಂದಿ ಪರಿಶುದ್ಧನಾಗು ! ಪ್ರಭುಲಿಂಗ ಲೀಲಾಕಾರನು
" ಅಲ್ಲಮಾ– ಅಲಂಮಾ– ಅಲ್ಲಮಾಪ್ರಭು " ಇತ್ಯಾದಿ ಶಬ್ದಗಳನ್ನು ಸಯುಕ್ತಿಕ
ವಾಗಿ ಸಾಧಿಸಿರುವನೆಂದು ಬರೆದಿರುವಿ. ಯುಕ್ತಿಯಿಂದ ಸಾಧಿಸಹೋದರೆ " ಬೇಗಮಾ "
" ರಾಜಮಾ " ಮೊದಲಾದ ಮುಸಲ್ಮಾನೀ ಶಬ್ದಗಳಾದರೂ ಸಂಸ್ಕೃತಗಳಾಗುವವು.
ಆದ್ದರಿಂದ ಯಥಾರ್ಥ ಮಾರ್ಗವನ್ನು ಬಿಟ್ಟು ಯುಕ್ತಿಯಿಂದ ಅಯಥಾರ್ಥ ಮಾರ್ಗವನ್ನು

ಸಾಧಿಸುವದು ಪ್ರಭುಲಿಂಗಲೀಲಾಕಾರನಾದ ಹಂಪೆಯವಿರೂಪಾಕ್ಷ ಪಂಡಿತನಿಗೇ ಆಗಲಿ ಅಥವಾ ನಿನಗೇ ಆಗಲಿ ಭೂಷಣವಲ್ಲ! ಆದ್ದರಿಂದ ಆ ಯಾವತ್ತು ನಾಮಗಳು ಸಂಸ್ಕೃತ ಭಾಷೆಯವಾಗಿರದೆ ಕೇವಲ ಅಸಂಗತ ಭಾಷೆಯವಾಗಿರುವವೆಂದು ತಿಳಿಯಬೇಕು.

(೧೬೩-೧೬೪-ಉ-ವಿ) " ಅಲ್ಲಮಾ " ಎಂಬ ಶಬ್ದವು ಪಾರ್ವತಿಗೆ ಸಂಬಂಧಿಸಿರುವದರಿಂದ ಸ್ತ್ರೀಲಿಂಗವಾಗಿರುವದೆಂದು ಬರೆದಿರುವಿ. ಪ್ರಭುಲಿಂಗಲೀಲೆಯ ೨ನೆಯ ಅಧ್ಯಾಯದ ೧೨೦ ನೆಯ ಶ್ಲೋಕವನ್ನು ನೋಡು. " ಅಲ್ಲಮಾ " ಶಬ್ದವು ಅಲ್ಲಮನಿಗೆ ಹೇಳಲ್ಪಟ್ಟಿರುತ್ತದೆ. ಇದರಮೇಲೆ ಪುಲ್ಲಿಂಗವಾಗುವದೆಂತು ? ಇನ್ನು " ಅಲಂಮಾ " ಶಬ್ದವು ' ಹಾಹಾ " ಶಬ್ದದಂತೆ ಪುಲ್ಲಿಂಗವಾಗಿರುತ್ತದೆಂದು ಬರೆದಿರುವಿ ; ಇದು ಪುಲ್ಲಿಂಗವಾಗಲಿಕ್ಕೆ ಸಂಬಂಧವಿಲ್ಲ. ಯಾಕಂದರೆ ಈಶಬ್ದವು " ಅಲಂ-ಮಾ " ಎಂಬ ಎರಡು ಅವ್ಯಯಗಳಿಂದ ಯುಕ್ತವಾಗಿರುವ ಕಾರಣ ಈ ಶಬ್ದಕ್ಕೆ ಪುಲ್ಲಿಂಗವೆಂದೂ ಹಾಗೂ ನಾಮಪದವೆಂದೂ ಯಾವ ಸಂಸ್ಕೃತಜ್ಞರೂ ಹೇಳಲಾರರು ! ಸಂಸ್ಕೃತ ಜ್ಞಾನ ಶೂನ್ಯರು ಮಾತ್ರ ಹೇಳಬಲ್ಲರು !

(೧೬೫-ಉ-ವಿ.) " ಅಲ್ಲಮ " ಎಂಬ ಶಬ್ದವು ಸಂಸ್ಕೃತ ಭಾಷೆಯದಲ್ಲವೆಂದು ಸಿದ್ಧವಾಗಿರುತ್ತದೆ. ೧೫೯-೧೬೦ ನೆಯ ವಿಮರ್ಶೆಗಳನ್ನು ನೋಡು ! ಆದಕಾರಣ ಈ ಶಬ್ದವು " ಅಲ್ಲಮಗೀರ " ಎಂಬ ಬಾದಶಹನ ನಾಮದಂತೆ ಅರಬ್ಬೀಭಾಷೆಯದಾಗಿರುವದೆಂದು ಭಾವಿಸಬೇಕು. " ಅಲ್ಲಮ " ಎಂಬ ಶಬ್ದವು ಅರಬ್ಬೀ ಭಾಷೆಯ ಕೋಶದಲ್ಲಿ ಪ್ರಸಿದ್ಧವಾಗಿರುವದು. ನೋಡಿ ಭ್ರಾಂತಿ ಶೂನ್ಯನಾಗು !

(೧೬೬-ಉ-ವಿ.) ಹಿಂದಿನ ವಿಮರ್ಶೆಗಳಲ್ಲಿ ಅಲ್ಲಮನು ಶುದ್ಧ ಸಾಂಪ್ರದಾಯದ ವೀರಶೈವನಾಗಿದ್ದಿಲ್ಲವೆಂದು ಸಿದ್ಧವಾಗುತ್ತದೆ. ಇಂದಮೇಲೆ ಇವನಿಗೆ ಸಾಕ್ಷಾತ್ಪರಶಿವನೆನ್ನುವದಂತೂ ದೂರೇ ಉಳಿಯಿತು. ಆದ್ದರಿಂದ ಇವನು ಸಾಮಾನ್ಯ ಹುಡುಗರಂತೆ ಶಾಲೆಗೆ ಹೋಗುತ್ತಿದ್ದನೆಂದು ಹೇಳುವದರಲ್ಲಿ ಯಾವ ಬಾಧೆಯೂ ಬರಲಾರದು.

(೧೬೭-ಉ-ವಿ.) ಅಲ್ಲಮನು ನಿಜವಾದ ವೀರಶೈವನೇ ಆಗಿದ್ದಪಕ್ಷದಲ್ಲಿ ಒಕ್ಕಲಿಗನಾದ ಗೊಗ್ಗಯ್ಯನನ್ನೂ ಹಾಗೂ ಅನಿಮಿಷಯ್ಯನನ್ನೂ ಗುರುವೆಂದು ತಿಳಿದು ಅತ್ಯಂತ ಭಕ್ತಿಯಿಂದೇಕೆ ಸ್ತೋತ್ರ ಮಾಡಿದನೆಂದು ಪ್ರಶ್ನೆ ಮಾಡಿದ್ದಕ್ಕೆ– " ಕಿಂಕುಲೇನ ಕಿಮಾಚಾರೈಃ ಕಿಂಶೀಲೇನ ಗುಣೇನವಾ | ಭಕ್ತಿಲೇಶಯುತಃ ಶಂಭೋಃ ಸವಂದ್ಯಃ ಸರ್ವದೇಹಿನಾಂ || " ಎಂಬ ಶ್ಲೋಕಾಭಿಪ್ರಾಯದಂತೆ ಶಿವಭಕ್ತಿಯುತರಾದ ಇವರಿಬ್ಬರನ್ನು ಸ್ತೋತ್ರ ಮಾಡಿದನೆಂದೂ, ಗುರುಗಳೆಂದರೆ ಪ್ರಕೃತದಲ್ಲಿ ದೊಡ್ಡವರೆಂದು ಅರ್ಥಮಾಡಿಕೊಳ್ಳಬೇಕೆಂದೂ ಬರೆದಿರುವಿ ; ಇದರಿಂದ ನಿನ್ನ ಬುದ್ಧಿಗೆ ಜಿಲೆಯಿಲ್ಲವೆಂದು ಹೇಳಬೇಕಾಗಿದೆ. ನೀನು

ಕೊಟ್ಟಿರುವ ಮೇಲಿನ ಶ್ಲೋಕಾಭಿಪ್ರಾಯದಂತೆ ಆಚಾರ- ಶೀಲ- ಗುಣಾದಿಗಳಿಲ್ಲದ ಶಿವ ಭಕ್ತಿ ಲೇಶವುಳ್ಳ ಯಾವದಾದರೊಂದು ಕುಲದಲ್ಲಿ ಜನಿಸಿದ ಲಿಂಗರಹಿತ ಶೂದ್ರನನ್ನು, ಅಲ್ಲಮನ ಸಾಂಪ್ರದಾಯಕರಾದ ಈಗಿನ ವಿರಕ್ತರು ವಂದಿಸುವರೋ ?

ಯತೋನು ಗೋಗಾರ್ಯ ವಿರಾಗಸಂಪದೋ: ಗುಣಾಧಿಕೋ ಲೋಕಹಿತಪ್ರವರ್ತನಃ।
ಗುರೋರ್ಗುರೂಣಾಮಪಿ ಮೇಗುರುರ್ಭವಾನಿ ತಿಸ್ಮದತ್ರಾತ್ಮವರೋಸಿ ನಿಶ್ಚಿತಂ॥

ಈಪ್ರಕಾರವಾಗಿ ಅಲ್ಲಮನು ಗೊಗ್ಗಯ್ಯನನ್ನು ಕುರಿತು- ಎಲೋ ಗೊಗ್ಗಯ್ಯನೇ- ನಾನು ಗುರುಗಳಿಗೆ ಗುರುವಾಗಿದ್ದೇನೆ. ನನಗೆ ನೀನು ಗುರುವಾಗಿರುವಿಯೆಂದು ಸ್ಪಷ್ಟ ವಾಗಿ ಗುರೂತ್ತಮೋತ್ತಮನೆಂದು ಸ್ತುತಿಯನ್ನು ಮಾಡಿದಾಗ್ಯೂ "ಗುರು" ಎಂದರೆ- ದೊಡ್ಡವರೆಂದು ಅರ್ಥಮಾಡಿಕೊಳ್ಳಬೇಕೆಂದು ಬೋಧಿಸುವ ನಿನ್ನ ಪಾಂಡಿತ್ಯದ ಮಹಿಮೆ ಯನ್ನು ಎಷ್ಟು ಬಣ್ಣಿಸಿದರೂ ಅಲ್ಪವೇ ಸರಿ! ಈ ಸಂದರ್ಭದಲ್ಲಿ ಕೆಲವು ಶ್ಲೋಕಗಳನ್ನು ಉದಾಹರಿಸಿರುವದು ಶುದ್ಧ ಅಸಂಗತವು! ಯಾಕಂದರೆ ಪರಶಿವನಿಗೂ ಲಿಂಗಾಂಗಿಗಳಿಗೂ ಅತ್ಯಂತ ಸಂಬಂಧವಿರುವದರಿಂದ ಆ ಅಭಿಪ್ರಾಯವು ಪ್ರೇಮಾತಿಶಯವನ್ನು ಸೂಚಿಸು ತ್ತದೆ. ಅದರಂತೆ ಅಲ್ಲಮನಿಗೆ ಗೊಗ್ಗಯ್ಯನು ಅತ್ಯಂತ ಸಂಬಂಧಿಯಾಗಿದ್ದನೋ ಹೇಗೆ!

(೧೬೮–ಉ–ವಿ.) ಜಗನ್ನಿಯಾಮಕನಾದ ಪರಮಾತ್ಮನು ವೇದಗಳನ್ನು ಹಾಗೂ ಆಗಮಗಳನ್ನೂ ಕೇವಲ ಸಂಸ್ಕೃತ ಭಾಷೆಯಿಂದ ರಚಿಸಿರುವನು. ಆ ಪರಮಾತ್ಮನ ಸ್ವರೂಪರಾದ ಶ್ರೀರೇಣುಕಾದಿ ಪಂಚಾಚಾರ್ಯರೂ ಹಾಗೂ ವ್ಯಾಸಾದಿ ಮಹರ್ಷಿ ಗಳೂ- ಶ್ರೀಶಂಕರಾಚಾರ್ಯರೇ ಮೊದಲಾದವರೂ ಸರ್ವಲೋಕೋದ್ಧಾರಕ್ಕಾಗಿ ಸಂ ಸ್ಕೃತ ಭಾಷೆಯಿಂದಲೇ ಗ್ರಂಥಗಳನ್ನು ರಚಿಸಿರುವರು. ಜಗದ್ವ್ಯಾಪಕವಾದ ಸಂಸ್ಕೃತ ಭಾಷೆಯಿಂದ ಗ್ರಂಥಗಳನ್ನು ರಚಿಸಿ ತಮ್ಮ ಸಿದ್ಧಾಂತವನ್ನೆಲ್ಲ ಇಡೀ ಜಗತ್ತಿನ ಜನರಿಗೆಲ್ಲ ಬೋಧಿಸುವದೇ ಜಗದುದ್ಧಾರಕರ ಕರ್ತವ್ಯವು! ಹೀಗೆ ಮಾಡದೆ ಸಂಸ್ಕೃತ ಭಾಷೆಯ ನ್ನರಿಯದ ಅಲ್ಲಮನು ಕೇವಲ ಕನ್ನಡ ಭಾಷೆಯಲ್ಲಿಯೇ ತನ್ನ ವಚನವನ್ನು ಬರೆದ ಕಾರಣ ಇವನಿಗೆ ಜಗದುದ್ಧಾರಕನೆಂದೂ ಶಿವಸ್ವರೂಪಿಯೆಂದೂ ಹೇಳುವದು ಶುದ್ಧ ತಪ್ಪು! ಅಲ್ಲ ಮನಿಗೆ ಸಂಸ್ಕೃತಭಾಷೆಯು ಬರುತ್ತಿತ್ತೆಂದು ಸಾಧಿಸುವ ನೀನು ೫೦-೫೧-ನೆಯ ವಿಮ ರ್ಶಗಳನ್ನು ನೋಡಿ ಭ್ರಾಂತಿಯಿಂದ ದೂರನಾಗು.

(೧೬೯–೧೭೦- ಉ- ವಿ.) ಅಲ್ಲಮನಿಗೆ ದ್ವೈತ--ಅದ್ವೈತ--ದ್ವೈತಾದ್ವೈತ- ಶಕ್ತಿವಿಶಿಷ್ಟಾದ್ವೈತ- ಮೊದಲಾದ ಯಾವತ್ತು ಸಿದ್ಧಾಂತಗಳ ಜ್ಞಾನವಿತ್ತೆಂದು ಬರೆದಿ ರುವಿ. ಇದು ನಿನ್ನ ದುರಭಿಮಾನದ ಪುಂಜವೇ ಸರಿ! ಬ್ರಹ್ಮಸೂತ್ರಗಳಿಗನುಸಾರವಾಗಿ "ಶಕ್ತಿ" ಎಂದರೇನು ? "ವಿಶಿಷ್ಟ" ಎಂದರೇನು ? "ಅದ್ವೈತ" ಎಂದರೇನು ಈ

ಮೂರೂ ಪದಗಳ ಯೋಜನೆಯು ಪರಬ್ರಹ್ಮನಲ್ಲಿ ಹ್ಯಾಗೆ ಆಗುತ್ತದೆ? ಎಂಬವಿವರವನ್ನು ಅಲ್ಲಮನು ತನ್ನ ವಚನದಲ್ಲಿ ಸ್ಪಷ್ಟ ಮಾಡಿದ್ದನ್ನು ತೋರಿಸಿ ದಿಗ್ವಿಜಯಿ ಪಂಡಿತನೆಂಬ ಪದವಿಯನ್ನು ಪಡೆಯ ಬಾರದೇ? ಡಡ್ಡಾ– ಈ ಸಿದ್ಧಾಂತಗಳ ಸ್ವರೂಪವು ನಿನಗೆ ಏನೂ ತಿಳಿದಿಲ್ಲ! ಸುಮ್ಮನೆ ಆ ಸಿದ್ಧಾಂತಗಳ ಹೆಸರುಗಳನ್ನು ಮಾತ್ರ ಕೇಳಿ ಬಡಬಡಿಸಿರುವಿ. ೧ ನೆಯ ವಿಮರ್ಶನವನ್ನು ನೋಡು.

(೧೭೧–ಉ–ವಿ.) ಯಾವತ್ತು ಮತಗಳ ಆಚಾರ್ಯರು ತಮ್ಮ ತಮ್ಮ ಸಿದ್ಧಾಂತಗಳನ್ನು ಭಾಷ್ಯರೂಪವಾಗಿ ಬರೆದಿಟ್ಟಂತೆ ಈ ಅಲ್ಲಮನಾದರೂ ತನಗೆ ಅಭಿಮತವಾದ ಯಾವ ಸಿದ್ಧಾಂತವನ್ನಾದರೂ ಭಾಷ್ಯರೂಪವಾಗಿ ಬರೆದಿಟ್ಟಿರುವನೇನು! ಬರೆದಿಟ್ಟಿರುವನೆಂಬರೆ ಯಾವ ಸೂತ್ರಗಳ ಮೇಲೆ ಬರೆದಿರುವನು? ಎಂದು ಪ್ರಶ್ನೆ ಮಾಡಿದ್ದಕ್ಕೆ– ಬ್ರಹ್ಮಸೂತ್ರಗಳ ಮೇಲಾಗಲಿ ಅಥವಾ ಶಿವಸೂತ್ರಗಳ ಮೇಲಾಗಲಿ ಇಂಥ ಹೆಸರಿನ ಭಾಷ್ಯವನ್ನು ಬರೆದಿಟ್ಟಿರುವನೆಂದು ಉತ್ತರವನ್ನು ಬರೆಯದೆ ೧೬೮ ನೆಯ ಉತ್ತರದಲ್ಲಿ ನೋಡಿಕೊಳ್ಳತಕ್ಕದ್ದೆಂದು ಬರೆದಿರುವಿ. ಆದರೆ ಆ ಉತ್ತರದಲ್ಲಿ ಅಲ್ಲಮನು ಭಾಷ್ಯವನ್ನು ರಚಿಸಲಿಲ್ಲವೆಂದು ಬರೆದಿರುವಿ; ಆ ಉತ್ತರವನ್ನು ನೋಡಿಕೊಳ್ಳತಕ್ಕದ್ದೆಂದು ಒಳ್ಳೆಗಾಂಭೀರ್ಯದಿಂದ ಬರೆಯುವದಕ್ಕಿಂತಲೂ ಅಲ್ಲಮನು ಭಾಷ್ಯವನ್ನು ರಚಿಸಿಲ್ಲವೆಂದು ಬರೆದಿದ್ದರೆ ನಿನ್ನ ಮರ್ಯಾದೆಯು ಹೋಗುತ್ತಿತ್ತೇನು? ಅಹುದು ಇದೇ ಅಲ್ಲವೇ ದುರಭಿಮಾನಿಗಳ ಲಕ್ಷಣವು!

(೧೭೨–ಉ–ವಿ.) “ಸುತ್ತಿ ಸುತ್ತಿ ಬಂದದಿಲ್ಲ ಲಕ್ಷಗಂಗೆಯ ಮಿಂದದಿಲ್ಲ ತುಟ್ಟತುದಿಯ ಮೇರುಗಿರಿಯ ಮೆಟ್ಟಿಕೂಗಿದಡಿಲ್ಲ ಗುಹೇಶ್ವರ” ಎನ್ನುವದೇ ಸೂತ್ರವು– ಎನ್ನುವದೇ ಭಾಷ್ಯವಿದ್ದೀತಲ್ಲವೇ? ಎಂದು ಪ್ರಶ್ನೆ ಮಾಡಿದ್ದಕ್ಕೆ– ಪ್ರಶ್ನೆ ಕರ್ತನು ನಿಂದಾ ಮಾಡಿರುವನೆಂದು ಬರೆದಿರುವಿ. ಹೀಗೆ ಯೋಗ್ಯ ಪ್ರಶ್ನವನ್ನು ಮಾಡಿದರೆ ಇದು ನಿಂದೆಯಾಯಿತೇನೋ? ಪ್ರವೀಣಾ? ಇದಕ್ಕೆ ಸರಿಯಾದ ಉತ್ತರವನ್ನು ಕೊಡದೆ ಪ್ರಶ್ನ ಕರ್ತನಿಗೆ ನಿಂದಕನೆಂದು ಅಂದುಕೊಂಡು “ಸರ್ವಚಾಂಡಾಲ ನಿಂದಕಃ” ಎಂದು ಬರೆದಿರುವಿ. ಈ ವಾಕ್ಯಾರ್ಥವು ನಿಂದಕನಾಗದಿರುವ ಪ್ರಶ್ನಕರ್ತನಿಗೆ ಸಂಬಂಧಿಸುವದೋ ಅಥವಾ ಪ್ರಶ್ನಕರ್ತನನ್ನು ನಿಂದಿಸುವ ನಿನಗೆ ಸಂಬಂಧಿಸುವದೋ? ಎನ್ನುವದನ್ನು ನೀನೇ ವಿಚಾರಿಸು! ಪಂಡಿತನೆಂದು ಹೆಸರಿಟ್ಟುಕೊಂಡು ನೀನು ಬರೆದಿರುವ “ಸರ್ವಚಾಂಡಾಲ ನಿಂದಕಃ” ಎಂಬ ಅತ್ಯಂತ ಪರಿಶುದ್ಧವಾದ ಪ್ರಯೋಗವು ಯಾವ ಮಹಾಕವಿಯದಿರಬಹುದೋ ತಿಳಿಯದು! ಇಂಥ ವಾಕ್ಯಗಳನ್ನುದಾಹರಿಸುವದೇ ನಿನ್ನ ವಿಕಟಪಾಂಡಿತ್ಯಕ್ಕೆ ಭೂಷಣವು!

(೧೭೩–ಉ–ವಿ.) ವಿರಕ್ತರು ಅಲ್ಲಮನಿಗೆ ಸಾಕ್ಷಾತ್ ಶಿವನೆಂದು ಹೇಳುತ್ತಾರೆ.

ಆದ್ದರಿಂದ ಅಲ್ಲಮನೆಂಬ ಪರಶಿವನಿಗೆ ಗುಹೇಶ್ವರನೆಂಬವನು ಗುರುವು ಹ್ಯಾಗೆ ಆದನೆಂದು ಪ್ರಶ್ನಕರ್ತನು ಕೇಳಿದ್ದಾನೆ. ಅದಕ್ಕೆ ನೀನು ಗುಹೇಶ್ವರನೆಂದರೆ ಶಿವನೆಂದು ಅರ್ಥ ವನ್ನು ಮಾಡಿಕೊಂಡು ಅಲ್ಲಮನಿಗೆ ಶಿವನು ಗುರುವಾಗಿದ್ದನೆಂದು ಬರೆದಿರುವಿ ; ಇದರ ಮೇಲಿಂದ ವಿರಕ್ತರು ಅಲ್ಲಮನಿಗೆ ಸಾಕ್ಷಾತ್ ಶಿವನೆಂದು ಹೇಳುವದು ಅತ್ಯಂತ ತಪ್ಪಾಯಿ ತಲ್ಲವೇ ? ಶಿವನು ಒಬ್ಬ ಅಲ್ಲಮನಿಗೇಕೆ ಸಮಸ್ತ ಪ್ರಪಂಚಕ್ಕೆ ಗುರುವಾಗಿದ್ದಾನೆ. ಈಸಂ ದರ್ಭದಲ್ಲಿ " ಏಕಏವ ಶಿವಃ ಸಾಕ್ಷಾತ್ " ಎಂಬ ಶ್ಲೋಕವನ್ನುದಾಹರಿಸಿ ಅಲ್ಲಮನು ಜಂಗಮಪದವಾಚ್ಯನಾದ ಕಾರಣ ಶಿವಸ್ವರೂಪನಾಗಿದ್ದನೆಂದು ಹೇಳಲು ಅಡ್ಡಿಯಿಲ್ಲವೆಂದು ಬರೆದಿರುವಿ. ಇವನಿಗೆ ಆದಿಯಲ್ಲಿ ಲಿಂಗಧಾರಣವೇ ಇದ್ದಿಲ್ಲವೆಂದು ೧೪ಆ ನೆಯ ವಿಮ ರ್ಶದಲ್ಲಿ ಸಿದ್ಧವಾಗಿದೆ. ಇಂಥವನಲ್ಲಿ ಶಿವಸ್ವರೂಪವಾದ ಜಂಗಮತ್ವವು ಬರಲು ಅವಕಾ ಶವಿಲ್ಲ ! ಹಾಗೂ ಈ ಅಲ್ಲಮನು ತನ್ನ ವಚನದಲ್ಲಿ– " ಆವಜಾತಿಯಲ್ಲಾದರೂ ಆಗಲಿ ಪುರಾತನರ ಚಾರಿತ್ರದಲ್ಲಿ ನಡೆದು ಗುರುಲಿಂಗ ಜಂಗಮಕ್ಕೆ ಅರ್ಥಪ್ರಾಣಾಭಿಮಾನವಂ ಕೊಟ್ಟು ಅಹಂಕಾರವಳಿದಿಹಂಥ ಪುರಾತನ ಮಹಾತ್ಮರ ಬಾಯತಂಬುಲವ ಮೇಲನೆ– ಬೀಳುಡುಗೆಯ ಹೊದುವೆ– ಆತನಪಾದರಕ್ಷೆಗಳೆಡನು ಮಂಡೆಯ ಮೇಲೆ ಹೊತ್ತು ಕೊಂಡು ಬದುಕುವೆನಯ್ಯ ಆಗಣಂಗಳ ದಾಸನ ದಾಸ ನಾನು ಜನ್ಮಜನ್ಮದಲ್ಲಿ ಆಗುವೆ ಕಾಣಾ ಗುಹೇಶ್ವರ ॥ ಈಪ್ರಕಾರವಾಗಿ ಗರುಲಿಂಗ ಜಂಗಮರಲ್ಲಿ ಭಕ್ತಿಯನ್ನಿಟ್ಟ ಯಾವ ಜಾತಿಯವರೇ ಇರಲಿ ಅವರ ಬಾಯತಂಬಲವನ್ನು ತಿನ್ನುವೆನೆಂದೂ, ಅವರ ಪಾದರಕ್ಷೆಗಳನ್ನು ತಲೆಯ ಮೇಲೆ ಇಟ್ಟುಕೊಳ್ಳುವೆನೆಂದೂ ಜನ್ಮಜನ್ಮಾಂ ತರದಲ್ಲಿ ಅವರ ದಾಸಾನು ದಾಸನಾಗುವೆನೆಂದೂ ಅಂದುಕೊಂಡಿರುವದರಿಂದ ಇವನಿಗೆ ಶಿವ ಸ್ವರೂಪಿಯಾದ ಜಂಗಮನೆಂದು ಹೇಳುವದಂತೂ ಕೋಟಿಯೋಜನ ದೂರವೇ ಉಳಿಯಿತು.

( ೧೭೪–ಉ–ವಿ ) ಅಲ್ಲಮನು ನಿಜವಾಗಿ ಪರಶಿವನೇ ಆಗಿದ್ದ ಪಕ್ಷದಲ್ಲಿ ಅತ್ಯಂತ ಅಮಂಗಲ ವೇಷದಿಂದ ಕಲ್ಯಾಣ ಪಟ್ಟಣವನ್ನು ಪ್ರವೇಶಿಸುವ ಉದ್ದೇಶವೇನಿತ್ತು ! ಈ ಅಮಂಗಲ ತನವನ್ನು ಬಿಟ್ಟು ಬಂದಿದ್ದರೆ ತನ್ನ ಉದ್ದೇಶವು ನೆರವೇರುತ್ತಿದ್ದಿಲ್ಲವೇ ಹೇಗೆ? ನೆರವೇರುತಿದ್ದಿಲ್ಲವೆಂದರೆ ನೆರವೇರದಬಗೆಯನ್ನು ಸ್ಪಷ್ಟವಾಗಿ ತೋರಿಸತಕ್ಕದ್ದು. ಎಂದು ಪ್ರಶ್ನ ಮಾಡಿದ್ದಕ್ಕೆ– " ಸ್ವತಂತ್ರೇಚ್ಛಸ್ಯ ನಿಯೋಗಪರ್ಯನು ಯೋಗಾನರ್ಹ ತ್ವಾತ್ " ಎಂಬ ನ್ಯಾಯವಾಕ್ಯವನ್ನು ತೋರಿಸಿ ಸ್ವತಂತ್ರೇಚ್ಛಾಶೀಲನಾದ ಪರಮಾತ್ಮ ನಂತೆ ಅಲ್ಲಮನಾದರೂ ಸ್ವತಂತ್ರೇಚ್ಛಾಶೀಲನಾಗಿದ್ದ ಕಾರಣ ಆವೇಷವನ್ನು ಧರಿಸಿದ್ದು ವಿಹಿತವೆಂದು ಅಭಿಪ್ರಾಯ ಪಟ್ಟಿರುವಿ. ಪರಮಾತ್ಮನ ದೃಷ್ಟಾಂತವು ಅಲ್ಲಮನಲ್ಲಿ ಸಂಗತ ವಾಗುವದಿಲ್ಲ; ಯಾಕಂದರೆ– ಸ್ವತಂತ್ರತಾಶಕ್ತಿಯಿಂದ ಕೂಡಿದ ಪರಮಾತ್ಮನೊಬ್ಬನೇ ಸ್ವತಂತ್ರನಾಗುವನಲ್ಲದೆ ಅವರು ಎಂದೂ ಸ್ವತಂತ್ರನಾಗುವದಿಲ್ಲ. " ಘಟಾಘೋ

ದ್ವಿವಿಧಃ ಸ್ವತಂತ್ರೋಽಸ್ವತಂತ್ರಶ್ಚೇತಿ ತತ್ರಸ್ವತಂತ್ರೋಹ್ಯಹಮೇವ" ಈಪ್ರಕಾರವಾಗಿ ಪರಮಾತ್ಮನು ತಾನೇ ಸ್ವತಂತ್ರನೆಂದು ಅಡಿತೋರಿಸಿದ್ದಾನೆ. ಇಂಥ ಸ್ವತಂತ್ರನಾದ ಪರಮಾತ್ಮನು ಕಿರಾತವೇಷವನ್ನಾದರೂ ಧರಿಸಬಹುದು ಅಥವಾ ಮತ್ತಾವ ವೇಷವನ್ನಾದರೂ ಧರಿಸಬಹುದು! ಇಂಥ ಜಗತ್ಕರ್ತನ ಸಾಮ್ಯವನ್ನು ನರರಿಗೆ ಯೋಜಿಸುವದು ನ್ಯಾಯವೇ? ಆದ್ದರಿಂದ ಲೋಕಗಳಲ್ಲಿ ತಿರುಕರು ಅಸಹ್ಯತೆಯಿಂದ ಕೂಡಿರುವಂತೆ ಇವನಾದರೂ ಕಲ್ಯಾಣಕ್ಕೆ ಅದೇ ರೀತಿಯಾಗಿ ಬಂದಿರಬಹುದೆಂದು ತೋರುತ್ತದೆ. ಇವನು ಆದಿಯಲ್ಲಿ ಲಿಂಗಧಾರಿಯಾಗಿದ್ದಿಲ್ಲವೆಂದೂ, ಆದ್ದರಿಂದಲೇ ಇವನು ಶಿವಸ್ವರೂಪಿಯಲ್ಲವೆಂದೂ ಹಿಂದೆ ಅನೇಕ ವಿಮರ್ಶಗಳಲ್ಲಿ ಸ್ಪಷ್ಟೀಕರಿಸಿದೆ. ನೋಡು! ಇಂಥವನಿಗೆ ಶಿವನ ಸಾಮ್ಯವನ್ನು ಕೊಟ್ಟಿರುವದು ಕೇವಲ ಅನ್ಯಾಯವು!

(೧೭೫-೧೭೬-೧೭೭ ಉ-ವಿ.) ಅಲ್ಲಮನು ಆದಿಯಿಂದಲೆ ವೈರಾಗ್ಯಶಾಲಿಯಾಗಿದ್ದನೆಂದರೆ ವಿಟವೇಷವನ್ನೇಕೆ ಧರಿಸಿದನೆಂದು ಪ್ರಶ್ನೆ ಮಾಡಿದ್ದಕ್ಕೆ— ಅಲ್ಲಮನು ವೈರಾಗ್ಯಶೀಲನಾಗಿದ್ದರೂ ಶಾಂಬರೀಮಾಯಾ ಗರ್ವಭಂಗವನ್ನು ಮಾಡುವದಕ್ಕೋಸ್ಕರ ಸಕಾರಣವಾಗಿ ವಿಟವೇಷವನ್ನು ಧರಿಸಿದನೆಂದು ಬರೆದಿರುವಿ. ವಿಟವೇಷವನ್ನು ಧರಿಸದಿದ್ದರೆ ಮಾಯಾ ಗರ್ವ ಭಂಗವಾಗುತ್ತಿದ್ದಿಲ್ಲವೇ ಹೇಗೆ? ಲೋಕದಲ್ಲಿ ಮಾಯೆಯನ್ನು ಗೆದ್ದ ಶುಕ ಮೊದಲಾದ ಮಹಾತ್ಮರು ಅಲ್ಲಮನಂತೆ ವಿಟವೇಷವನ್ನು ಧರಿಸಿಕೊಂಡೇ ಮಾಯೆಯನ್ನು ಗೆದ್ದಿರುವರೋ ಹೇಗೆ? ಮಾಯೆಯನ್ನು ಗೆಲ್ಲುವದಕ್ಕೆ ಆತ್ಮಸಂಯಮನವು ಮೂಲ ಕಾರಣವಾಗುವದಲ್ಲದೆ ವಿಟವೇಷವು ಕಾರಣವಾಗುವದಿಲ್ಲ; ವಿಟವೇಷವೆನ್ನುವದು ಅಸದ್ವಾಸನಾ ಮೂಲಕವಾಗಿರುವದಷ್ಟೆ! ಇಂಥ ಅಸದ್ವಾಸನೆಯು ಇವನಲ್ಲಿದ್ದಮೇಲೆ ಇವನಿಗೆ ವೈರಾಗ್ಯ ಶಾಲಿಯೆಂದೂ ಹಾಗೂ ತತ್ವಜ್ಞಾನಿಯೆಂದೂ ಅನ್ನುವ ಬಗೆ ಹೇಗೆ? ತತ್ವಜ್ಞಾನಿಯಾಗಿದ್ದ ಇವನಿಗೆ ಯಥೇಷ್ಟಾಚರಣೆಯಿದ್ದ ಮೂಲಕ ವಿಟವೇಷವು ದೋಷಕರವಲ್ಲವೆಂದರೆ "ಶುನಾಂ ತತ್ವದೃಶಾಂಚೈವ ಕೋಭೇದೋಽಶುಚಿ ಭಕ್ಷಣೇ||" ಎಂಬ ಪಂಚದಶಿಯ ವಾಕ್ಯದ ದೃಷ್ಟಾಂತವನ್ನು ಕೊಡಬಹುದಲ್ಲವೇ? ಆದಕಾರಣ ಇವನು ಅಸದ್ವಾಸನಾ ಮೂಲಕವಾಗಿ ವಿಟವೇಷದಿಂದ ಭೂಷಿತನಾಗಿದ್ದರಿಂದ ಇವನಲ್ಲಿ ಆದಿಯಿಂದ ವೈರಾಗ್ಯವಿದ್ದಿಲ್ಲವೆಂದೇ ಹೇಳಬೇಕಾಗುತ್ತದೆ.

(೧೭೮-ಉ-ವಿ) ಅಲ್ಲಮನು ಬನವಾಸಿ ಪಟ್ಟಣಕ್ಕೆ ಬರುವದಕ್ಕಿಂತ ಪೂರ್ವದಲ್ಲಿ ಮಾಯೆಯನ್ನು ಜಯಿಸಿದ್ದಿಲ್ಲವೇ ಹೇಗೆ? ಎಂದು ಪ್ರಶ್ನೆ ಮಾಡಿದ್ದಕ್ಕೆ— ಜಯಿಸಿದ್ದನೆಂದು ಬರೆದಿರುವಿ. ಹಾಗೂ ಈ ಸಂದರ್ಭದಲ್ಲಿ ಅಲ್ಲಮನಿಗೆ ಅಗ್ನಿಯ ದೃಷ್ಟಾಂತವನ್ನೂ ಮಾಯೆಗೆ ಕಟ್ಟಿಗೆಯ ದೃಷ್ಟಾಂತವನ್ನೂ ಕೊಟ್ಟು ದಡ್ಡ ಜನರಿಗೆ ಒಂದು ರೀತಿಯಿಂದ ಸಮಾಧಾನವಾಗುವಂತೆ ಬರೆದಿರುವಿ; ಈ ದೃಷ್ಟಾಂತವು ಮಾಯಾ ಹಾಗೂ ಅಲ್ಲಮರ

ವಿಷಯದಲ್ಲಿ ಸಂಗತವಾಗುವದಿಲ್ಲ. ಯಾಕಂದರೆ– ಅಗ್ನಿಯು ಮೊದಲು ತಾನು ಸುಟ್ಟ ಕಟ್ಟಿಗೆಯನ್ನೇ ಪುನಃ ಸುಡುವದಿಲ್ಲ; ಹಾಗೂ ಸುಡಲಿಕ್ಕೂ ಬರುವದಿಲ್ಲ. ಬೇರೊಂದು ಕಟ್ಟಿಗೆಯನ್ನು ಮಾತ್ರ ಸುಡಬಲ್ಲದು. ಕಟ್ಟಿಗೆಗಳು ಅನೇಕಗಳಾಗಿರುವಂತೆ ಮಾಯೆಯು ಅನೇಕ ಪ್ರಕಾರವಾಗಿರದೆ ಒಂದೇ ಆಗಿರುವದು. ಮಾಯಾತತ್ವವು ಅನೇಕವಾಗಿರುವದೆಂದರೆ ತತ್ವಗಳು ಮೂವತ್ತಾರೇ ಎಂದು ಹೇಳುವದು ಉಚಿತವಾಗಲಾರದೆಂದು ತಿಳಿ! ಪೂರ್ವದಲ್ಲಿ ಮಾಯೆಯನ್ನು ಜಯಿಸಿ ಅದನ್ನು ಸಂಪೂರ್ಣ ಲಯಗೊಳಿಸಿದ ಇವನಿಗೆ ಪುನಃ ಮಾಯೆಯು ದರ್ಶನವಾಗುವದೆಂತು? ಹಾಗೂ ಅದನ್ನು ಜಯಿಸುವದೆಂತು? ಒಂದು ಡೊಂಕಾದ ಕಟ್ಟಿಗೆಯನ್ನು ಮೊದಲು ಸುಟ್ಟು ಬೂದಿಯನ್ನು ಮಾಡಿದ ಮೇಲೆ ಪುನಃ ಅದೇ ಡೊಂಕ ಕಟ್ಟಿಗೆಯ ದರ್ಶನವಾಗುವದುಂಟೇ? ಹಾಗೂ ಅದನ್ನು ಸುಟ್ಟು ಬೂದಿಯನ್ನು ಮಾಡಲಿಕ್ಕೆ ಬರುವದುಂಟೇ? ಧ್ವಂಸಕ್ಕೆ ಧ್ವಂಸವಿಲ್ಲೆಂಬ ನ್ಯಾಯ ವಾಕ್ಯವು ನಿನ್ನ ಕರ್ಣಕುಹರವನ್ನು ಪ್ರವೇಶಿಸಿಲ್ಲವೇ? ಆದ್ದರಿಂದ ಇವನು ಆದಿಯಲ್ಲಿ ಮಾಯೆಯನ್ನು ಜಯಿಸಿದವನಲ್ಲವೆಂದೂ ಹಾಗೂ ಇವನು ವೈರಾಗ್ಯಶಾಲಿಯಲ್ಲವೆಂದೂ ತಿಳಿಯಬೇಕು.

(೧೭೯--ಉ–ವಿ.) ಅಲ್ಲಮನಿಗೆ ಆದಿಯಿಂದ ವೈರಾಗ್ಯವಿದ್ದಿಲ್ಲವೆಂದು ಮೇಲಿನ ವಿಮರ್ಶದಲ್ಲಿ ಸಿದ್ಧವಾಗಿದೆ. ನೋಡು! ಅವಕಾರಣ ಇವನಿಗೆ ಆಧಿಕ್ಯವನ್ನು ಕೊಡುವದು ಅನ್ಯಾಯವು!

(೧೮೦–ಉ–ವಿ.) ವಿರಕ್ತನಾದ ಅಲ್ಲಮನಿಗೆ ಶಿವದೀಕ್ಷೆಯನ್ನು ಮಾಡುವ ಅಧಿಕಾರವುಂಟೇ ಹೇಗೆ? ಇಲ್ಲವೆಂದರೆ ಗೋರಕ್ಷನಾಥಾದಿಗಳಿಗೆ ಇವನು ದೀಕ್ಷೆಯನ್ನು ಮಾಡಿದನೆಂದು ಪ್ರಭುಲಿಂಗಲೀಲೆಯಲ್ಲಿ ಬರೆದಿರುವವಲ್ಲ! ಇದು ಹೇಗೆ! ಎಂದು ಪ್ರಶ್ನೆ ಮಾಡಿದ್ದಕ್ಕೆ– ಅಲ್ಲಮನು ಗೋರಕ್ಷನಾಥಾದಿಗಳಿಗೆ ದೀಕ್ಷೆಯನ್ನು ಮಾಡಿರುವದಿಲ್ಲವೆಂದು ಬರೆದಿರುವಿ. ಪ್ರಭುಲಿಂಗಲೀಲೆಯ ೧೯ ನೆಯ ಅಧ್ಯಾಯವನ್ನು ನೋಡು!

ಶಿಷ್ಯೋಹಿಸದ್ಗುರುವರೇಣ ಪರೀಕ್ಷಣೀಯೋ ನೋಜಾತುಶಿಷ್ಯಬಟುಕೇನ ಗುರುಃಪರೀಕ್ಷ್ಯಃ।
ತದ್ರಕ್ಷಮಾಂ ಪ್ರಭುಗುರೋ ಶಿವದೀಕ್ಷಯೇತಿ ಗೋರಕ್ಷನಾಥವಿನುತೋಽಭವದಕ್ಷರೇಶಃ॥
ದೀಕ್ಷಾಮವಾಪ್ಯ ಕೃಪಯಾಂತರನುಗ್ರಹೀತುಂ ಶಿಕ್ಷಾಕ್ರಮೈಸ್ತನುಫಲಕ್ಷವಿಧೈಃ ಪರೀಕ್ಷ್ಯ।
ಪ್ರಕ್ಷೀಣಸಿದ್ಧಿಜಡಿಮಗ್ರಥನಾಯ ತಸ್ಮೈ ಮೋಕ್ಷಪ್ರದಂ ಸಮುದಿಶದ್ಗುಣಶೂನ್ಯತತ್ವಂ॥

ಈಪ್ರಕಾರವಾಗಿ ಗೋರಕ್ಷನಾಥನು ಆದಿಯಲ್ಲಿ ನನಗೆ ಶಿವದೀಕ್ಷೆಯನ್ನು ಮಾಡೆಂದು ಅಲ್ಲಮನನ್ನು ಪ್ರಾರ್ಥಿಸಿಕೊಂಡನೆಂದೂ ಅವನ ಪ್ರಾರ್ಥನೆಯಂತೆ ಅಲ್ಲಮನು ದೀಕ್ಷೆಯನ್ನು ಮಾಡಿ ಶಿಕ್ಷಾಕ್ರಮದಿಂದ ಪರೀಕ್ಷಿಸಿ ಮೋಕ್ಷಪ್ರದತತ್ವವನ್ನು ತಿಳುಹಿಸಿದನೆಂದೂ ಸ್ಪಷ್ಟವಾ

ಗುತ್ತಿದ್ದಾಗ್ಯೂ ಅವನಿಗೆ ದೀಕ್ಷೆಯನ್ನು ಮಾಡಿಲ್ಲವೆಂದು ಬರೆಯುವದನ್ನು ನೋಡಿದರೆ ಶಾಸ್ತ್ರಜ್ಞರು ಆಶ್ಚರ್ಯ ಪಡದೆ ಇರಲಾರರು! ಆದ್ದರಿಂದ ಇವನಿಗೆ ನಿಜವಿರಕ್ತನೆಂದು ಹೇಳಲಿಕ್ಕೆ ಬರಲಾರದು!

(೧೮೧–ಉ–ವಿ.) ಶೂನ್ಯ ಸಿಂಹಾಸನವೆಂದರೇನು? ಎಂದು ಪ್ರಶ್ನೆ ಮಾಡಿದ್ದಕ್ಕೆ– ಪ್ರಣವಸಿಂಹಾಸನವೆಂದು ಉತ್ತರವನ್ನು ಬರೆದಿರುವಿ. "ಶೂನ್ಯ" ಎಂದರೆ "ಪ್ರಣವ" ಎಂದು ಅರ್ಥವಾಗುವದೋ? ಈಪ್ರಕಾರವಾಗಿ ಅರ್ಥವನ್ನು ಮಾಡುವ ನಿನ್ನ ಸಂಸ್ಕೃತಾಭ್ಯಾಸವು ಯಾವ ಮಹಾತ್ಮನಲ್ಲಿ ಆಗಿರುವದೋ ತಿಳಿಯದು! ಅಹೋ! ನಿನ್ನದು ತಪ್ಪಲ್ಲ; ಗ್ರಂಥಘಾತುಕನೂ ಧೂರ್ತಶಿಖಾಮಣಿಯೂ ಆದ ಗುಳೇದಗುಡ್ಡದ ಒಬ್ಬ ವಿರಕ್ತನಿಂದ ನೂತನವಾಗಿ ಕಲ್ಪಿಸಲ್ಪಟ್ಟ ಶ್ಲೋಕಗಳ ಅಭಿಪ್ರಾಯದ ಪ್ರಕಾರ ಬರೆದಂತೆ ಕಾಣುತ್ತದೆ. ಆದರೂ ಹೀಗೆ ಭ್ರಾಂತಿಯುಕ್ತನಾಗಿ ಬರೆಯುವದು ಉಚಿತವಲ್ಲ! ಶೂನ್ಯಸಿಂಹಾಸನವೆಂದರೆ ಪ್ರಣವ ಸಿಂಹಾಸನವೆಂದು ಉತ್ತರವನ್ನು ಹೇಳುವದಕ್ಕಿಂತಲೂ ಶೂನ್ಯವಾದಿಗಳ ಸಿಂಹಾಸನವೆಂದು ಹೇಳಿದ್ದರೆ ನೆಟ್ಟಗಾಗುತ್ತಿತ್ತಲ್ಲವೇ!

೧೮೨–ಉ–ವಿ.) ಶೂನ್ಯಸಿಂಹಾಸನವೆನ್ನುವದು ಬಸವನ ಕಾಲಕ್ಕೆ ಹುಟ್ಟಿತೋ ಅಥವಾ ಮೊದಲೇ ಇತ್ತೋ? ಮೊದಲೇ ಇತ್ತೆಂದರೆ ಯಾವ ಊರಲ್ಲಿತ್ತೆನ್ನುವದನ್ನು ಸಪ್ರಮಾಣವಾಗಿ ತೋರಿಸತಕ್ಕದ್ದೆಂದು ಪ್ರಶ್ನೆ ಮಾಡಿದ್ದಕ್ಕೆ– ಶೂನ್ಯ ಸಿಂಹಾಸನವು ಕಲಿಯುಗದಲ್ಲಿ ಮಾತ್ರ ಬಸವಾದಿಗಳಿಂದ ಕಲ್ಯಾಣ ಪಟ್ಟಣದಲ್ಲಿ ಸ್ಥಾಪಿಸಲ್ಪಟ್ಟಿತೆಂದೂ ಮೊದಲಾದರೂ ಆ ಕಲ್ಯಾಣದಲ್ಲಿಯೇ ಇತ್ತೆಂದೂ ಬರೆದಿರುವಿ. ಈ ವಿಷಯದಲ್ಲಿ– "ಕಲೌತತ್ರ ಭೂದೇವಸ್ಯಪೀಠಂ ಕಲ್ಯಾಣಪತ್ತನೇ | ಬಸವೇಶಾದಿ ಪ್ರಮಥಸಂದೋಹ ಪರಿಕಲ್ಪಿತಂ ||" ಎಂಬ ಶ್ಲೋಕವನ್ನು ಪ್ರಮಾಣವನ್ನಾಗಿ ಉದಾಹರಿಸಿ ಇದು ವಾತುಲಾಗಮದ ಶ್ಲೋಕವೆಂದು ಬರೆದಿರುವಿ. ಇದು ವಾತುಲಾಗಮದ ಶ್ಲೋಕವೋ ಅಥವಾ ಧೂರ್ತ ಶಿಖಾಮಣಿಯಾದ ಗುಳೇದಗುಡ್ಡದ ವಿರಕ್ತನ ಶ್ಲೋಕವೋ? ಹುಚ್ಚಾ– ಇದು ವಾತುಲಾಗಮದ ಶ್ಲೋಕವಲ್ಲ! ಈಗ್ಯೆ ಸುಮಾರು ೩೦– ೪೦ ವರ್ಷಗಳ ಪೂರ್ವದಲ್ಲಿ ಗುಳೇದಗುಡ್ಡವೆಂಬ ಗ್ರಾಮದಲ್ಲಿ ಮುರಗೀ ಮಠದ ಒಬ್ಬ ವಿರಕ್ತನಿದ್ದನು. ಅವನು ಜಗತ್ಪ್ರಸಿದ್ಧವಾದ "ಶ್ರೀಕಂಠಭಾಷ್ಯ" ವನ್ನು ಕೆಲಕೆಲವು ಸ್ಥಾನಗಳಲ್ಲಿ ತಿದ್ದಿ ಸ್ವಲ್ಪಸ್ವಲ್ಪ ವ್ಯತ್ಯಸ್ತ ಮಾಡಿ ಅದಕ್ಕೆ "ನೀಲಕಂಠಭಾಷ್ಯ" ವೆಂದು ಹೆಸರಿಟ್ಟು, ಕನ್ನಡಕ್ಷರಗಳಲ್ಲಿ ಮುದ್ರಿಸಿ ಅದರಲ್ಲಿ ತನ್ನ ದುರುದ್ದೇಶವನ್ನು ಮನಸ್ಸಿಗೆ ಬಂದಂತೆ ಸಾಧಿಸಿಕೊಂಡಿದ್ದಾನೆ. "ಅನಾವೃತ್ತಿಃ ಶಬ್ದಾದನಾವೃತ್ತಿಃ ಶಬ್ದಾತ್" ಎಂಬ ಬ್ರಹ್ಮಸೂತ್ರದ ೪ ನೆಯ ಅಧ್ಯಾಯದ ಅಂತಿಮಸೂತ್ರ ಭಾಷ್ಯದಲ್ಲಿ ಶ್ರೀಕಂಠಶಿವಾಚಾರ್ಯರ ಭಾಷ್ಯವನ್ನೆಲ್ಲ ಹಾಳು ಮಾಡಿ ಆ ಸ್ಥಾನದಲ್ಲಿ ಕೇವಲ ವಿರಕ್ತರ ವಿಷಯವನ್ನೇ ತುಂಬಿಸಿ ಬಿಟ್ಟಿದ್ದಾನೆ.

ಈ ಪ್ರಕಾರವಾಗಿ ತನ್ನ ದುರುದ್ದೇಶವನ್ನು ಸಾಧಿಸುವದಕ್ಕೋಸ್ಕರ ಪೂರ್ವಾಚಾರ್ಯರ ಮಹಾ ಗ್ರಂಥವನ್ನು ಕೆಡಿಸಿದ ಇವನು ಎಂಥ ಪಾಪಾತ್ಮನಾಗಿರಬಹುದೆನ್ನುವದನ್ನು ವಾಚಕರೇ ಊಹಿಸಬಹುದು! ಶ್ರೀಕಂಠಭಾಷ್ಯಕ್ಕೂ ಹಾಗೂ ಅವನು ಪ್ರಿಂಟಮಾಡಿಸಿರುವ ಭಾಷ್ಯಕ್ಕೂ ವಿಚಾರಶೀಲರು ತುಲನೆ ಮಾಡಿ ನೋಡಿದರೆ ಅವನ ವಂಚಕತನವು ತಾನೇ ವ್ಯಕ್ತವಾಗುತ್ತದೆ. ಮರಳಿ ಸಮಯದ ಆ ಧೂರ್ತ ವಿರಕ್ತನೇ ತಾನು ಅಚ್ಚು ಮಾಡಿಸಿದ ಆ ಗ್ರಂಥದ ಆದಿಯಲ್ಲಿ "**ಭಾಷ್ಯಾರ್ಥ ಸಂಗ್ರಹ**" ವೆನ್ನುವದೊಂದು ಲೇಖವನ್ನು ಬರೆದುಕೊಂಡಿದ್ದಾನೆ ಆ ಲೇಖದಲ್ಲಿ **ಮಂದರಾದ್ರಾಗಣಾಃಸರ್ವೇ**" ಇತ್ಯಾದಿ ೨೦ ಶ್ಲೋಕಗಳನ್ನು ರಚಿಸಿ ಅವುಗಳಲ್ಲಿ ವಿರಕ್ತರ ಆಧಿಕ್ಯವನ್ನೂ, ಬಸವ ಚನ್ನಬಸವ ಅಲ್ಲಮರ ಆಧಿಕ್ಯವನ್ನೂ, ವಿರಕ್ತರೇ ದೀಕ್ಷಾ ಶಿಕ್ಷಾ ಮೋಕ್ಷಾದಿಗಳಿಗೆ ಕಾರಣೀಭೂತರೆನ್ನುವದನ್ನೂ, ಶೂನ್ಯಸಿಂಹಾಸನವು ಕಲ್ಯಾಣ ಪಟ್ಟಣದಲ್ಲಿ ಬಸವಾದಿಗಳಿಂದ ನಿರ್ಮಿಸಲ್ಪಟ್ಟಿತೆನ್ನುವದನ್ನೂ, ಯುಗಯುಗಾಂತರಗಳಲ್ಲಿ ಚರಲಿಂಗವು ನಿರಂಜನ ನಿರ್ವಾಣಯ ಮೊದಲಾದ ಹೆಸರುಗಳಿಂದ ಅವತರಿಸಿತೆನ್ನುವದನ್ನೂ, ಇವೇ ಮೊದಲಾದ ಅಸತ್ಯದ ಮೋಟ್ಟೆಯನ್ನು ಕಲ್ಪಿಸಿ ಬರೆದಿದ್ದಾನೆ. ನೀನು ಉದಾಹರಿಸಿದ "**ಕಲೌ ತತ್ಪ್ರಭುದೇವಸ್ಯ**" ಎಂಬ ಶ್ಲೋಕವು ಆ ಧೂರ್ತನು ಕಲ್ಪಿಸಿದ ೨೦ ಶ್ಲೋಕಗಳಲ್ಲಿ ಒಂದಾಗಿರುತ್ತದೆ. ಹೀಗೆ ತಾನು ಆ ಶ್ಲೋಕಗಳನ್ನು ಅಸತ್ಯವಾಗಿ ರಚಿಸಿ ಅವು ಉತ್ತರವ ತುಲಾಗಮದ ಪರಶಿವ ಪ್ರಮಥ ಸಂವಾದದಲ್ಲಿರುತ್ತವೆಂದು ಬರೆದಿರುತ್ತಾನೆ ಉತ್ತರ ವಾತುಲಾಗಮವೆನ್ನುವದು ಪ್ರಮಥ ಪರಶಿವ ಸಂವಾದ ರೂಪವಲ್ಲ! ಪಾರ್ವತೀ ಪರಮೇಶ್ವರ ಸಂವಾದ ರೂಪವಾಗಿರುತ್ತದೆ. ಈ ವಿಷಯದಲ್ಲಿ **ಅನುಭವಸೂತ್ರ**ವನ್ನು ನೋಡು. **ಕಲ್ಯಾಣದ ಮಾಯಿದೇವನೆಂ**ಬ ಪಂಡಿತನು ಉತ್ತರ ವಾತುಲಾಗಮವನ್ನೇ ಸಂಕ್ಷೇಪ ರೀತಿಯಿಂದ "**ಅನುಭವಸೂತ್ರ**" ಎಂಬ ಹೆಸರಿನಿಂದ ಗ್ರಂಥರೂಪವಾಗಿ ಬರೆದಿದ್ದಾನೆ. ಆ ಗ್ರಂಥದಲ್ಲಿ ಈ ಧೂರ್ತನು ಉದಾಹರಿಸಿರುವ ಉತ್ತರವಾತುಲಾಗಮದ ಶ್ಲೋಕಗಳ ಅಭಿಪ್ರಾಯವು ತಿಲಾಂಶವಾದರೂ ಬಂದಿರುವದಿಲ್ಲ; ಅಂದಮೇಲೆ ಇವನು ಎಷ್ಟು **ವಂಚಕ**ನಿದ್ದನೆನ್ನುವದು ನಿನಗಾದರೂ ಗೊತ್ತಾಗಿರಬಹುದು! ಇವನು ಪ್ರಿಂಟ ಮಾಡಿದ ಪುಸ್ತಕದಲ್ಲಿರುವ ಶ್ಲೋಕಗಳನ್ನು ತೆಗೆದುಕೊಂಡು ವಾರದವರು "ವಿರಕ್ತೋತ್ಪತ್ತಿ ಕ್ರಿಯಾಲಕ್ಷಣ" ವೆಂಬ ಪುಸ್ತಕದಲ್ಲಿ ಮುದ್ರಿಸಿರುತ್ತಾರೆ. ಅವು ಜಗತ್ತಿನ ತುಂಬ ಹಬ್ಬಿ ಪ್ರಮಾಣಗಳಾಗಿ ಹೋಗಿರುತ್ತವೆ. ಮಾಡುವದೇನು? ಕಾಲವೈಚಿತ್ರ್ಯವು! ಈ ಧೂರ್ತ ವಿರಕ್ತನು **ಶ್ರೀಕಂಠಭಾಷ್ಯ**ವನ್ನು ಕೆಡಿಸಿ ಹಾಳು ಮಾಡಿ ಅದಕ್ಕೆ **ನೀಲಕಂಠಭಾಷ್ಯ**ವೆಂದು ಬೇರೆ ನಾಮವನ್ನು ಇಟ್ಟಂತೆ, ಹಿಂದಕ್ಕೆ ಎಷ್ಟೋ ಜನ ಧೂರ್ತರು ಗ್ರಂಥಗಳನ್ನು ಕೆಡಿಸಿ ಹಾಳುಮಾಡಿ ವಿರಕ್ತರ ಆಧಿಕ್ಯವನ್ನು ಬೆಳೆಯಿಸಿದ್ದಾರೆ. **ಹೇಲಾಪುರದ ಬಸವ ಕವಿ**ಯೆಂಬವನು ತಾನು ಸಂಸ್ಕೃತದಲ್ಲಿ **ಬಸವ ಪುರಾಣ**ವನ್ನು ಬರೆದಾಗ್ಯೂ ಚನ್ನಬಸವ ಪುರಾಣವನ್ನು ಬರೆದ **ಹಂಪಿಯ ವಿರೂಪಾಕ್ಷ ಪಂಡಿತನು** ತಾನು ಸಂಸ್ಕೃತದಲ್ಲಿ **ಪ್ರಭುಲಿಂಗಲೀಲೆ**

ಯನ್ನು ಬರೆದಾಗ್ಯೂ ತಾವೇ ಗ್ರಂಥಕರ್ತರೆಂದು ಬರೆದು ಕೊಳ್ಳದೆ ವ್ಯಾಸನ ಹೆಸರಿನಿಂದ ಬರೆದು ಹೋಗಿರುತ್ತಾರೆ. ಈಪ್ರಕಾರವಾಗಿ ಅಸತ್ಯವಾಗಿ ಬರೆದು ಧರ್ಮವನ್ನು ಹಾಳುಮಾಡಿ ಬಿಟ್ಟಿದ್ದಾರೆ. ಆದ್ದರಿಂದ ಆ ಧೂರ್ತ ವಿರಕ್ತನು ಬರೆದ ಶ್ಲೋಕಗಳು ಪ್ರಮಾಣಗಳಲ್ಲ! ಆ ಧೂರ್ತನ ಅಭಿಪ್ರಾಯದಂತೆಯೇ ಶೂನ್ಯ ಸಿಂಹಾಸನವು ಕಲಿಯುಗದಲ್ಲಿ ಬಸವಾದಿಗಳಿಂದ ಸ್ಥಾಪಿಸಲ್ಪಟ್ಟಿತೆಂದರೆ ಉಳಿದ ಯುಗಗಳಲ್ಲಿ ಯಾರಿಂದ ಸ್ಥಾಪಿಸಲ್ಪಟ್ಟಿತೆನ್ನುವದನ್ನು ಹೇಳಬಲ್ಲೆಯಾ? ಅಸ್ತು ಪೂರ್ವದಲ್ಲಿ ಕಲ್ಯಾಣದಲ್ಲಿ ಶೂನ್ಯಸಿಂಹಾಸನವಿದ್ದಿಲ್ಲ; ಬಸವನು ತಾನೇ ಕಟ್ಟಿಸಿಕೊಟ್ಟನೆಂದು ಪ್ರಭುಲಿಂಗಲೀಲೆಯ ೨೧ ನೆಯ ಅಧ್ಯಾಯದಲ್ಲಿ ಸ್ಪಷ್ಟವಾಗಿ ಉಲ್ಲೇಖಿಸಲ್ಪಟ್ಟದೆ. “ಹೃದಂತರಸ್ಥಂ ಸುದೃಢಂವಿಭಾವ್ಯ ತದ್ಬಹಿಃ ಕ್ಲೃಪ್ತಪೂಜಾರ್ಥಮಮುಷ್ಯಸದ್ಗುರೋಃ ‖ ಸ ಶೂನ್ಯಸಿಂಹಾಸನ ಮೇಕಮುದ್ಭೃತಂ ಸುಶಿಲ್ಪಿನಾಕಾರಯಿತುಂ ಸಮುದ್ಯತಃ ‖ ೧೫ ‖ ಎಂಬೀ ಶ್ಲೋಕದಿಂದ ಸ್ಪಷ್ಟವಾಗುತ್ತದೆ. ಯುಗಯುಗಾಂತರಗಳಲ್ಲಿ ಕಲ್ಯಾಣದಲ್ಲಿ ಶೂನ್ಯಸಿಂಹಾಸನ ವಿತ್ತೆಂದು ಹೇಳುವದೇಕೆ? ಬಸವನಿಗಿಂತ ಪೂರ್ವದಲ್ಲಿ ಇಡೀ ಹಿಂದುಸ್ಥಾನದಲ್ಲಿ ಇಂಥ ಊರಲ್ಲಿ ಇಂಥದೊಂದು ವಿರಕ್ತಮಠವಿತ್ತೆಂದು ಶಿಲಾಶಾಸನದ ಆಧಾರವನ್ನು ಕೊಡಬಲ್ಲೆಯಾ? ಸುಮ್ಮನೆ ದುರಭಿಮಾನದಿಂದ ಶೂನ್ಯಸಿಂಹಾಸನವು ಅನಾದಿಕಾಲದಿಂದ ಇರುತ್ತದೆಂದು ಬಡಬಡಿಸಿದರೆ ಪ್ರಯೋಜನವೇನು? ಪ್ರಭುಲಿಂಗಲೀಲೆಯ ೧೧ ನೆಯ ಅಧ್ಯಾಯದಲ್ಲಿ—

ಶ್ರಯಂತಿಯ ನ್ನಿಶ್ಚಲಭಕ್ತಿನಿಷ್ಠಿತಾಃ ಶಿವೈಕತಾನಾಃ ಸ್ಥಲಸುತ್ರತೇ ವಯಂ।
ಸಮೇತ್ಯಭಿಕ್ಷಾಂ ಶಿವಭಕ್ತಿಲಕ್ಷಣಾಂ ಸಮರ್ಥಯಂತೋ ವಿಚರಾಮವಿಷ್ಟಪೇ ‖೧೯‖

ಅಹಂಹಿನಾಮ್ನಾಽಭವಮಲ್ಲಮು ಪ್ರಭುರ್ನಯತ್ರಕುತ್ರಾಪಿಕುಟೀರ ಮಸ್ತಿಮೇ।
ನಚಕ್ರಿಯಾವಾ ನತಪೋನಸಾಧನಂ ನಸಂಸ್ಥಿತಿಶ್ಚೇತ್ಯುದಿತೋಽವದತ್ಸತಂ ‖ ೨೦ ‖

ಈಪ್ರಕಾರವಾಗಿ ಅಲ್ಲಮನು ಗೊಗ್ಗಯ್ಯನ ಮುಂದೆ ಎಲ್ಲಿಯೂ ತನಗೆ ಸ್ಥಾನವೇ ಇಲ್ಲೆಂದು ಮೊದಲು ಹೇಳಿದ್ದಾನೆ. ಅಂದಮೇಲೆ ಯಾವಾಗ್ಯೂ ಶೂನ್ಯಸಿಂಹಾಸನ ವಿತ್ತೆನ್ನುವ ಬಗೆ ಹೇಗೆ? ಈ ಯಾವತ್ತು ಕಾರಣಗಳಿಂದ ಶೂನ್ಯಸಿಂಹಾಸನವೆಂಬ ಮಠವು ಬಸವನಿಗಿಂತ ಮೊದಲು ಇದ್ದಿಲ್ಲವೆಂದೂ ಅವನಿಂದಲೇ ನಿರ್ಮಿಸಲ್ಪಟ್ಟಿತೆಂದೂ ಎಂದು ಅನ್ನುವದೇ ಸಿದ್ಧಾಂತವು! ಹೀನಾದರೂ ಆ ಶೂನ್ಯಸಿಂಹಾಸನಕ್ಕೆ ಪ್ರಣವ ಸಿಂಹಾಸನವೆಂದು ಹೇಳಿರುವದು ಒಂದು ಪಕ್ಷದಲ್ಲಿ ಯೋಗ್ಯವೇ ಸರಿ! ಯಾಕಂದರೆ “ಪ್ರಣವ” ಅಂದರೆ—ಅತ್ಯಂತ ನೂತನವೆಂದು ಅರ್ಥವಾಗುವ ಕಾರಣ “ನೂತನ ಸಿಂಹಾಸನ”ವೆನ್ನುವದೇ ಸಾಧು!

(೧೮೩-ಉ-ವಿ.) ಅನಾದಿಕಾಲದಿಂದ ವೀರಶೈವಧರ್ಮ ಪರಿಪಾಲನಕ್ಕೋಸ್ಕರ ಶ್ರೀಜಗದ್ಗುರು ರೇಣುಕಾದಿ ಪಂಚಾಚಾರ್ಯರು ಪಂಚಧರ್ಮ ಪೀಠಗಳನ್ನು ಸ್ಥಾಪಿಸಿ

ರಲು ಪುನಃ ಬಸವನಿಗೆ ಕಲ್ಯಾಣಪಲ್ಲಿ ಶೂನ್ಯಸಿಂಹಾಸನವೆನ್ನುವದನ್ನು ಹೊಸದಾಗಿ ಸ್ಥಾಪಿಸುವ ಅವಶ್ಯಕತೆಯೇನಿತ್ತು ? ಪಂಚಸಿಂಹಾಸನಗಳನ್ನು ಮೂಲೆಗೊತ್ತ ಬೇಕೆಂದಿರಬಹುದೇನು ! ಎಂದು ಪ್ರಶ್ನೆ ಮಾಡಿದ್ದಕ್ಕೆ– “ಬಸವೇಶ್ವರನು ಅನಾದಿಕಾಲದಿಂದ ವೀರಶೈವ ಧರ್ಮ ಪರಿಪಾಲನಕ್ಕೋಸ್ಕರ ಸ್ಥಾಪಿಸಿರುವ ಶ್ರೀರೇಣುಕಾದಿ ಪಂಚಾಚಾರ್ಯರ ಧರ್ಮಪೀಠಗಳನ್ನು ಮೂಲೆಗೊತ್ತಬೇಕೆಂಬ ಉದ್ದೇಶದಿಂದ ಶೂನ್ಯಸಿಂಹಾಸನವನ್ನು ಸ್ಥಾಪಿಸದೆ ಕೇವಲ ಅವರ ಸನ್ಮಾನಕ್ಕಾಗಿಯೇ ಶೂನ್ಯಸಿಂಹಾಸನವನ್ನು ಸ್ಥಾಪಿಸಿದನು. ಹಾಗೂ ಬಸವೇಶ್ವರನಿಗೆ ಆ ಪೀಠಗಳ ಮೇಲೆ ದ್ವೇಷವಿರಲಿಲ್ಲ” ಎಂದು ಬರೆದಿರುವಿ. ಶ್ರೀಜಗದ್ಗುರು ಪಂಚಾಚಾರ್ಯರ ಧರ್ಮ ಪೀಠಗಳು ಅನಾದಿಕಾಲದಿಂದಿದಾಗ್ಯೂ ಬಸವಾದಿಗಳು ನೂತನವಾಗಿ ಶೂನ್ಯಸಿಂಹಾಸನವೆನ್ನುವದನ್ನು ಕಟ್ಟಿಸಬೇಕೆಂದರೆ ವೈಷಮ್ಯವೇ ಮುಖ್ಯ ಕಾರಣವೆಂದು ತಿಳಿಯುತ್ತದೆ. ಯಾಕಂದರೆ ಅಂದಿನಿಂದ ಆಚಾರ್ಯ ಸಾಂಪ್ರದಾಯದವರಿಗೂ ಹಾಗೂ ಅಲ್ಲಮನ ಸಾಂಪ್ರದಾಯದವರಿಗೂ ಪರಸ್ಪರ ಭೇದಭಾವಗಳು ಇದ್ದೇ ಇರುತ್ತವೆ. ಬಸವಾದಿಗಳು **ಚಂಡಾಲ– ಹೊಲೆಯ– ಮಾದಿಗ** ಮೊದಲಾದವರನ್ನು ಸ್ತುತಿಸಿದ್ದರೂ ಶ್ರೀರೇಣುಕಾದಿ ಭಗವತ್ಪಾದರನ್ನು ಎಲ್ಲಿಯೂ ಸ್ತುತಿಸಿರುವದಿಲ್ಲ ; ಇವರಿಂದ ಜಾತಿ ಸಂಕರಕಾರಕರಾದ ಬಸವಾದಿಗಳಿಗೆ ಆಚಾರ್ಯ ಪೀಠಗಳಲ್ಲಿ ಭಕ್ತಿಯುದ್ದಿಲ್ಲವೆಂತಲೂ ತಮ್ಮ ಸಂಕರಜಾತಿಗೆ **ಶೂನ್ಯಸಿಂಹಾಸನವೆನ್ನುವದನ್ನು** ಗುರುಪೀಠವನ್ನಾಗಿ ಮಾಡಿಕೊಂಡಿರಬಹುದೆಂದು ಸ್ಪಷ್ಟವಾಗಿ ತೋರುತ್ತದೆ. ಅಂದಮೇಲೆ ಶೂನ್ಯಸಿಂಹಾಸನವೆನ್ನುವದು ದ್ವೇಷದಿಂದ ಹುಟ್ಟಿತೆನ್ನುವದೇ ಸಿದ್ಧಾಂತವು !

(೧೮೪–ಉ–ವಿ.) ಅಲ್ಲಮನು ಬಸವ ಚನ್ನಬಸವಾದಿಗಳು ಇರುವಾಗಲೇ ದೇಹಬಿಟ್ಟನೋ ಅಥವಾ ಅವರು ದೇಹಬಿಟ್ಟನಂತರ ಬಿಟ್ಟನೋ ? ಎಂದು ಪ್ರಶ್ನೆ ಮಾಡಿದ್ದಕ್ಕೆ– “ಅಲ್ಲಮಪ್ರಭು ದೇವರು ಬಸವಾದಿ ಪ್ರಮಥರು ಇರುವಾಗಲೆ ದೇಹವನ್ನು ಬಿಡದೆ ದೇಹಸಹಿತರಾಗಿಯೇ ಶ್ರೀಗಿರಿಯ ಕದಳೀವನದಲ್ಲಿ ಗುಪ್ತರಾದರು.” ಎಂದು ಉತ್ತರವನ್ನು ಬರೆದಿರುವಿ. ಬಸವಾದಿಗಳು ತೀರಿಕೊಂಡ ನಂತರ ಅಲ್ಲಮನು ಕದಲೀವನದಲ್ಲಿ ಗುಪ್ತನಾದನೆಂದು ಸಂಸ್ಕೃತ ಪ್ರಭುಲಿಂಗಲೀಲೆಯುಲ್ಲಿರುವದೇನು ! ಕದಲೀವನವೆಂದರೇನು ? ಈ ವನದ ವರ್ಣನವನ್ನು ಪ್ರಭುಲಿಂಗ ಲೀಲಾಕಾರನು ಮಾಡಿದ್ದಾನೆಯೇ ಹೇಗೆ? ಮಾಡಿದ್ದರೆ ತೋರಿಸು ! ಗುಪ್ತನಾದನೆಂದರೆ ಹ್ಯಾಗೆ ಗುಪ್ತನಾದನು ? ಗುಪ್ತನಾಗುವ ರೀತಿಯು ಹೇಗೆ ? ಗುಪ್ತನಾಗುವ ಕ್ರಮವು ಯಾವ ಗ್ರಂಥದಲ್ಲಿ ಹೇಳಲ್ಪಟ್ಟಿರುವದೆನ್ನುವದನ್ನು ತೋರಿಸಿ ಧನ್ಯನಾಗು !

(೧೮೫–ಉ–ವಿ.) ಅಲ್ಲಮನು ಮನುಷ್ಯನಾಗಿದ್ದಕಾರಣ ಸರ್ವ ಮನುಷ್ಯರಂತೆ ಅವನ ಸಾಧಾರಣ ಶರೀರದಲ್ಲಿ [illegible] ಈಸಂ

ದರ್ಪಣದಲ್ಲಿ ತೇರದಾಳ ದೃಷ್ಟಾಂತವನ್ನು ಕೊಟ್ಟಿರುವಿ. ತೇರದಾಳದಲ್ಲಿರುವದು ಅವನ ಸ್ಮಾರಕವಾಗಿರುವದು. ಬಾಲಗಂಗಾಧರ ತಿಲಕರು ಮುಂಬಯಿ ಪಟ್ಟಣದಲ್ಲಿ ಮೃತನಾದ್ದಾಗ್ಯೂ ಅನೇಕ ಕಡೆಗೆ ಅವರ ಸ್ಮಾರಕ ದೇವಾಲಯಗಳು ಆಗಿರುವಂತೆ ಅಲ್ಲಮನ ಸ್ಮಾರಕತೆಯ ಬಗ್ಗೆ ಆಗಿದ್ದರೂ ಆಗಬಹುದು! ಇದರಲ್ಲೇನಾಶ್ಚರ್ಯವು? ರಂಭಾಪುರೀ- ಉಜ್ಜಯಿನೀ ಮೊದಲಾದ ಸ್ಥಾನಗಳಲ್ಲಿ ಅಲ್ಲಮನ ಸಮಾಧಿಯಂತೆ ಸಮಾಧಿಗಳಿಲ್ಲ. ಆಪೀತಗಳನ್ನು ನೋಡದೆ ಸುಮ್ಮನೆ ಬರೆದರೆ ಜನರು ಏನೆಂದಾರೆಂಬ ಭೀತಿಯಾದರೂ ಇರಬೇಕು. ಶ್ರೀರೇಣುಕಾದಿ ಪೂರ್ವಾಚಾರ್ಯರು ತಾವು ಅವತರಿಸಿದ ಲಿಂಗಗಳಲ್ಲಿಯೇ ಅಡಗಿ ಹೋಗಿದ್ದಾರೆನ್ನುವದು ಸಿದ್ಧಾಂತ ಶಿಖಾಮಣಿ ಮೊದಲಾದ ಗ್ರಂಥಗಳಲ್ಲಿ ಸುಪ್ರಸಿದ್ಧವೇ ಅದೆ. ಕಾಶೀಸಿಂಹಾಸನದಲ್ಲಿ ಮಾತ್ರ ಶ್ರೀಜಗದ್ಗುರು ವಿಶ್ವಾರಾಧ್ಯರು ಕುಳಿತುಕೊಳ್ಳುವ ಸ್ಥಾನವು ವೇದಿಕಾ ರೂಪವಾಗಿರುತ್ತದೆ. ಹೀಗಿದ್ದರೂ ದುರಭಿಮಾನದಿಂದ ಅಲ್ಲಮನ ವಿಷಯದಲ್ಲಿ ಪೂರ್ವಾಚಾರ್ಯರ ಸಾದೃಶ್ಯವನ್ನು ಕೊಟ್ಟಿರುವದು ಅಸೂಯೆಯಲ್ಲದೆ ಬೇರೊಂದಿಲ್ಲ!

(೧೮೩-ಉ-೨) ಬಾಗಲಕೋಟೆಯಲ್ಲಿ ನೆರವೇರಿದ ವೀರಶೈವ ಮಹಾಸಭೆಯ ರಿಪೋರ್ಟಿನಲ್ಲಿ ಮ|ರಾ| ಮಲ್ಲಿಕಾರ್ಜುನಪ್ಪ ಕಲ್ಯಾಣಶೆಟ್ಟಿ- ಬಿ ಎ- ಇವರದೊಂದು ಐತಿಹಾಸಿಕ ವಿಷಯಕವಾದ ಲೇಖವು ಪಾಸಾಗಿ ಮುದ್ರಣ ಮಾಡಲ್ಪಟ್ಟಿರುತ್ತದೆ. ಆ ಲೇಖದಲ್ಲಿ ಈಗಿನ ಸನ್ಯಾಸಿಗಳ ಸಾಂಪ್ರದಾಯದ ಪೂರ್ವಿಕರಿಗೆ ೧೨ ನೆಯ ಶತಮಾನಕ್ಕಿಂತ ಪೂರ್ವದಲ್ಲಿ ಲಿಂಗಧಾರಣವಿದ್ದಿಲ್ಲವೆಂದೂ ಅಲ್ಲಮನು ಅಲಿಂಗಿಯಾಗಿದ್ದನೆಂದೂ ಬರೆದಿರುತ್ತದೆ. ಈ ಲೇಖದ ಬಗ್ಗೆ ನಿಮ್ಮ ಅಭಿಪ್ರಾಯವೇನೆಂದು ಪ್ರಶ್ನೆ ಮಾಡಿದ್ದಕ್ಕೆ- ಆ ಲೇಖಕನು ದ್ವೇಷಾಸೂಯೆಯಿಂದ ಬರೆದಿರುತ್ತಾನೆಂದು ಉತ್ತರವನ್ನು ಬರೆದಿರುವಿ. ಸತ್ಯಶೋಧಕರಾದ ಆ ಲೇಖಕರಿಗೆ ವಿರಕ್ತ- ಬಸವಾದಿಗಳ ವಿಷಯದಲ್ಲಿ ದ್ವೇಷವಿರುವದಕ್ಕೆ ಕಾರಣವೇನಿತ್ತೆನ್ನುವದನ್ನು ತೋರಿಸಿದ್ದರೆ ನೆಟ್ಟಗಾಗುತ್ತಿತ್ತು. ಹಾಗೆ ತೋರಿಸದೆ ಸುಮ್ಮನೆ ಅಸೂಯೆಯಿಂದ ಬರೆದಿದ್ದಾರೆಂದರೆ ಯಾರು ಒಪ್ಪಲಾರರು! ಬಸವಪುರಾಣ- ಚನ್ನಬಸವ ಪುರಾಣ- ಪ್ರಭುಲಿಂಗಲೀಲಾ- ಶರಣಲೀಲಾಮೃತ- ಸಿಂಗಿರಾಜ ಪುರಾಣ- ಅನೇಕ ವಚನಕಾರರ ವಚನಗಳು- ಕೆಲವು ಇತಿಹಾಸಗಳು- ಇವೆಲ್ಲವುಗಳನ್ನು ಆಲೋಚನ ಮಾಡಿ ನೋಡಿದರೆ ಮ|ರಾ| ಮಲ್ಲಿಕಾರ್ಜುನಪ್ಪ ಕಲ್ಯಾಣಶೆಟ್ಟಿ-ಬಿ-ಎ- ಇವರು ಬರೆದ ಲೇಖಾಭಿಪ್ರಾಯವು ನಿಜವೆಂದು ಕಂಡು ಬರುತ್ತದೆ. ಐತಿಹಾಸಿಕ ವಿಚಾರದಿಂದ ಕೂಡಿದ ಈ ಲೇಖವು ಸರ್ವಾನುಮತದಿಂದ ಅಂಗೀಕರಿಸಲ್ಪಟ್ಟಿರುವದೆಂದು ರಿಪೋರ್ಟಿನಲ್ಲಿ ಶರಾ ಬರೆದಾಗ್ಯೂ ಈ ಲೇಖವು ಸರ್ವಜನ ಸಮ್ಮತಿಯಿಂದ ರಿಪೋರ್ಟಿನಲ್ಲಿ ಸೇರಿರುವದಿಲ್ಲವೆಂದು ಬರೆದಿರುವಿ. ಇದರಿಂದ ನಿನಗೆ ಮಹಾ ಸಭೆಯ ಪದ್ಧತಿಯೇ ಗೊತ್ತಿದ್ದಂತೆ ಕಾಣುವದಿಲ್ಲ! ಸಭೆಗೆ ಅನೇಕ ಜನರು ಅನೇಕ ವಿಧವಾದ ಲೇಖಗಳನ್ನು ಕಳುಹಿಸಿಕೊಡುತ್ತಾರೆ. [illegible] ಶೋಧ

ಮಾಡಿ ಅಯೋಗ್ಯ ಲೇಖಗಳನ್ನು ತೆಗೆದು ಹಾಕಿ ಯೋಗ್ಯ ಲೇಖಗಳನ್ನೇ ಪಾಸುಮಾಡಿ ಸಭೆಯಲ್ಲಿಡುತ್ತಾರೆ. ಇದು ಸಭೆಯ ಕಾರ್ಯದೇಶೀರ ಪದ್ಧತಿಯಾಗಿರುತ್ತದೆ. ಅದರಂತೆ ಮ। ರಾ। ಮಲ್ಲಿಕಾರ್ಜುನಪ್ಪ ಕಲ್ಯಾಣಶೆಟ್ಟಿ— ಬಿ— ಎ— ಇವರ ಲೇಖವಾದರೂ ಸಬ್ಜೆಕ್ಟ ಕಮಿಟಿಯಲ್ಲಿ ಪಾಸಾಗಿ ರಿಪೋರ್ಟಿನಲ್ಲಿ ಸೇರಿದ್ದರೂ ಸರ್ವಜನ ಸಮ್ಮತಿಯಿಂದ ಸೇರಿರುವದಿಲ್ಲವೆನ್ನುವದು ಮೂರ್ಖತನವೇ ಸರಿ! ಈ ಲೇಖನ ಸಮ್ಮತಿಯ ಬಗ್ಗೆ ರಾವ ಬಹಾದ್ದೂರ ರುದ್ರಗೌಡರು ಅರಟಾಳ ಹಾಗೂ ಶ್ರೀಮಂತ ಲಖಮಗೌಡರು ಬ್ಯಾರಿಸ್ಟರ್— ಸರ್ ದೇಸಾಯಿ ಒಂಟಮೂರಿಕರ ಇವರೇ ಮೊದಲಾದ ಪ್ರಮುಖ ಜನರ ಹಸ್ತಾಕ್ಷರಗಳು ಆ ರಿಪೋರ್ಟಿನಲ್ಲಿ ಇರುವದಿಲ್ಲವಾದ ಕಾರಣ ಇದು ನಂಬತಕ್ಕವುದಲ್ಲವೆಂದು ಬರೆದಿರುವಿ; ಅಯ್ಯೋ— ಹುಚ್ಚನೇ— ಪ್ರಿಂಟಾದ ರಿಪೋರ್ಟಿನ ಸಾವಿರಾರು ಪ್ರತಿಗಳಲ್ಲಿ ಸಭಾಧ್ಯಕ್ಷರೇ ಮೊದಲಾದವರು ಪ್ರತಿಯೊಂದು ಲೇಖದ ಕೆಳಗಾಗಲಿ ಅಥವಾ ಒಟ್ಟು ರಿಪೋರ್ಟಿನಲ್ಲಾಗಲಿ ತಮ್ಮ ಹಸ್ತಾಕ್ಷರಗಳನ್ನು ಬರೆಯುವರೇನು? ಆಹುದು ನಿನ್ನ ವಿಕಟಪಾಂಡಿತ್ಯದ ಪ್ರಭಾವವು! ಪ್ರಿಂಟಾದ ಆ ರಿಪೋರ್ಟಿನಲ್ಲಿ ಯಾವ ಸ್ಥಲವಲ್ಲಿಯೂ ಅವರ ಹಸ್ತಾಕ್ಷರಗಳಿಲ್ಲದ ಕಾರಣ ಒಟ್ಟಿಗೆ ಆ ರಿಪೋರ್ಟೇ ಸುಳ್ಳೆನ್ನಬೇಕಾಯಿತು. ನಿನ್ನ ಅಭಿಪ್ರಾಯಕ್ಕೆ ಬುದ್ಧಿಮಂತರೇ ಆಗಲಿ ಅಥವಾ ಸರಕಾರದವರೇ ಆಗಲಿ ಒಪ್ಪಿಗೆಯನ್ನು ಕೊಟ್ಟಾರೇನು? ಇಷ್ಟು ಸಹ ನಿನ್ನ ಬುದ್ಧಿಗೆ ಹೊಳೆಯದೆ ಇದ್ದಮೇಲೆ ನಿನ್ನ ಬುದ್ಧಿಯ ಮಹಿಮೆಯನ್ನು ಎಷ್ಟು ಬಣ್ಣಿಸಿದರೂ ಅಲ್ಪವೇ ಸರಿ! ಅಲ್ಲಮಾದಿಗಳ ವಿಷಯದಲ್ಲಿ ಕಲ್ಪಿಸಿ ಬರೆದಂತೆ ಶ್ರೀರೇಣುಕಾಚಾರ್ಯಾದಿಗಳ ವಿಷಯದಲ್ಲಿ ಯಾರಾದರೂ ಕಲ್ಪಿಸಿ ಬರೆದರೆ ಅವನ್ನು ನಿಜವೆಂದು ತಿಳಿಯಬಹುದೇ ಹೇಗೆ? ಎಂದು ಬರೆದಿರುವಿ. ಪರಮ ಪುನೀತರಾದ ಆಚಾರ್ಯರ ಪಾದರಿಗೆ ಯಾವ ಕುಹಕನೂ ಕೂಡ ಅಸತ್ಯವನ್ನು ಕಲ್ಪಿಸಿ ಬರೆಯಲು ಸಮರ್ಥನಾಗಲಾರನೆಂದು ತಿಳಿ! ಈ ಉತ್ತರದ ಸಂದರ್ಭದಲ್ಲಿ— ಯುಗಯುಗಾಂತರಗಳಿಂದ ಗುರುಸಾಂಪ್ರದಾಯವು ಬಂದಿರುವಂತೆ ವಿರಕ್ತ ಸಾಂಪ್ರದಾಯವಾದರೂ ಯುಗಯುಗಾಂತರಗಳಿಂದ ಬಂದಿರುವದೆಂದು "ಮಂದರಾದ್ರೌಗಣಾಃ ಸರ್ವೇ" ಇತ್ಯಾದಿ ಶ್ಲೋಕಗಳನ್ನು ಪ್ರಮಾಣಗಳನ್ನಾಗಿ ಉದಾಹರಿಸಿರುವಿಯಷ್ಟೆ! ಆದರೆ ಈ ಶ್ಲೋಕಗಳು ಧೂರ್ತ ಶಿಖಾಮಣಿಯಾದ ಗುಳೇದಗುಡ್ಡದ ವಿರಕ್ತನಿಂದ ನೂತನವಾಗಿ ಕಲ್ಪಿಸಲ್ಪಟ್ಟವುಗಳೆಂದು ೧ಲರ ನೆಯ ವಿಮರ್ಶದಲ್ಲಿ ಸ್ಪಷ್ಟೀಕರಿಸಿದೆ. ನೋಡು. ಆದ್ದರಿಂದ ಈ ಶ್ಲೋಕಗಳು ಪ್ರಮಾಣಗಳೆನಿಸುವದಿಲ್ಲ. ಶಾಸ್ತ್ರಕಾರರು ನಿಜವಾದ ವಿರಕ್ತರಿಗೆ ಸಾಂಪ್ರದಾಯವನ್ನು ಹೇಳುವರೋ ಅಥವಾ ವೈರಾಗ್ಯಶಾಲಿಗಳಾದ ಯಾರಾದರೂ ವಿರಕ್ತರಾಗಬಹುದೆಂದು ಹೇಳುವರೋ ನೀನೇ ಶುದ್ಧ ಮನಸ್ಸಿನಿಂದಾಲೋಚಿಸು! ಹುಚ್ಚಾ— ನಿಜವಾದ ವಿರಕ್ತರಿಗೆ ಮಠಮಾನ್ಯಾದಿಗಳಿರುವದಿಲ್ಲ; ವಿರಕ್ತರು ಇಂಥವರೇ ಆಗಬೇಕೆಂದು ನಿಯಮಪೂರ್ವಕವಾದ ಸಾಂಪ್ರದಾಯವಾದರೂ ಇರುವದಿಲ್ಲ; ಯಾವ ಜಾತಿಯವನೇ ಆಗಲಿ ವೈರಾಗ್ಯಶೀಲನಾದರೆ ವಿರಕ್ತನಾಗಬಹುದು! ವಿರಕ್ತನಾಗುವದಕ್ಕೆ ವೈರಾಗ್ಯವೇ ಮೂಲ

ಕಾರಣವಲ್ಲದೆ ಸಾಂಪ್ರದಾಯವು ಕಾರಣವಲ್ಲ! “**ಯದಹರೇವ ವಿರಜೇತ್ ತದ ಹರೇವ ಪ್ರವ್ರಜೇತ್**” ಎಂಬ ಶ್ರುತಿವಾಕ್ಯಾಭಿಪ್ರಾಯದಂತೆ ಯಾವನಿಗೆ ಯಾವ ದಿವಸ ವಿಷಯಾದಿಗಳಲ್ಲಿ ವಿರಾಗಬುದ್ಧಿಯು ಉತ್ಪನ್ನ ವಾಗುವದೋ ಅದೇ ದಿವಸವೇ ಅವನು ಗೃಹಗ್ರಾಮಾದಿಗಳನ್ನು ಬಿಟ್ಟು ವನಕ್ಕೆ ತೆರಳುವದೇ ನಿಜವಾದ ವಿರತಿಯ ಲಕ್ಷಣವಾಗಿದೆ. ಹೀಗೆ ವರ್ತಿಸದೆ ಯಾವನಾದರೊಬ್ಬ ಹುಡುಗನನ್ನು ಸಂಪಾದಿಸಿಕೊಂಡು ಅವನಿಗೆ **ವಿರಕ್ತಮರಿಯೆಂದು** ಹೆಸರಿಟ್ಟು **ಕಪನಿ- ಕೌಪೀನ** ಮೊದಲಾದವುಗಳಿಂದಲಂಕರಿಸಿ ಅವನು ವಯಸ್ಸಿಗೆ ಬಂದ ಕೂಡಲೆ ಕೆಲವು ನಾಮಧಾರಿ ವಿರಕ್ತರು ಕೂಡಿ ಅವನ ಉಡಿಯಲ್ಲಿ **ಒಂದು ಹೊತ್ತಿಗೆಯನ್ನು** ಹಾಕಿದ ಕೂಡಲೆ ಅವನು ವಿರಕ್ತನಾಗಲಾರನು! ಆದ ಕಾರಣ ನಿಜವಾದ ವಿರಕ್ತನಿಗೆ ಸಾಂಪ್ರದಾಯವಿಲ್ಲವೆನ್ನುವದೇ ಶಾಸ್ತ್ರಾಭಿಪ್ರಾಯವು! ವಿಷಯವೈರಾಗ್ಯದಿಂದ ಮಹಾ ವಿರಕ್ತರೆಂದೆನಿಸಿ ಕೊಂಡ **ನಿಜಗುಣಾರಾಧ್ಯ** ಮೊದಲಾದ ಮಹಾತ್ಮರೂ ಹಾಗೂ ಬಾಗಲಕೋಟೆಯ **ಮಲ್ಲಯ್ಯನವರೇ** ಮೊದಲಾದ ವೈರಾಗ್ಯಶಾಲಿಗಳೂ ಯಾವ ವಿರಕ್ತರ ಸಾಂಪ್ರದಾಯವನ್ನು ಅನುಸರಿಸಿದ್ದರು? ಆ ಮಹನೀಯರೇ ನಿಜವಾದ ವಿರಕ್ತರು! ಇದನ್ನು ತಿಳಿಯದೆ ಸುಮ್ಮ ಸುಮ್ಮನೇ ವಿರಕ್ತಸಾಂಪ್ರದಾಯವೆಂದೂ ಅದರಲ್ಲಿ- **ಮುರಿಗಿ- ಚಿಲಾಳ- ಕೆಂಪು- ಕುಮಾರ- ಸಂಪಾದನ** ಸಮಯಗಳೆಂಬ ಸಾಂಪ್ರದಾಯಗಳೆಂದೂ ಕಲ್ಪಿಸಿಕೊಂಡು ಬಡಬಡಿಸುವದು ಶಾಸ್ತ್ರವಿಹಿತವಾಗುವದೋ! ಎಂದೂ ಆಗಲಾರದು ಆದ್ದರಿಂದ ನಿಜವಾದ ವಿರಕ್ತನಿಗೆ ಸಾಂಪ್ರದಾಯವಿರುವದಿಲ್ಲವೆಂದೂ ಇವನಿಗೆ ವೈರಾಗ್ಯವೇ ಮೂಲ ಕಾರಣವೆಂದೂ ಹೇಳುವದೇ ಸಿದ್ಧಾಂತವು! ಈ ಸಂದರ್ಭದಲ್ಲಿ “**ಜಂಗಮಾನುಗ್ರಹಾದೇವ**” ಎಂಬೆರಡು ಶ್ಲೋಕಗಳನ್ನು ಉದಾಹರಿಸಿ ದೀಕ್ಷಾಕಾಲದಲ್ಲಿ ಗುರುವಿಗೆ ಜಂಗಮನು ಸಾಕ್ಷಿಯಾಗಿರಬೇಕೆಂದೂ ಅಂಥ ಜಂಗಮನೇ ವಿರಕ್ತನೆಂದೂ ಬರೆದಿರುವಿ. ವಿರಕ್ತನು ಅಷ್ಟಾವರಣಾಂತರ್ಗತ ಜಂಗಮನಾಗುವದಿಲ್ಲವೆಂದು **ಸನ್ಯಾಸಾಶ್ರಮ ವಿಮರ್ಶತತ್ವಸ್ಥಿರೀಕರಣ** ವೆಂಬ ಗ್ರಂಥದಲ್ಲಿ ಚನ್ನಾಗಿ ಖಂಡಿಸಲ್ಪಟ್ಟಿರುತ್ತದೆ. ನೋಡು! ದೀಕ್ಷಾದಿ ಮಂಗಲಕಾರ್ಯಗಳಲ್ಲಿ ವಿರಕ್ತನಿಗೆ ಬರಲಿಕ್ಕೆ ಹಕ್ಕೇ ಇಲ್ಲವೆಂದು ಧರ್ಮ ಶಾಸ್ತ್ರವು ಸಾರುತ್ತಿರಲು ಸಾಕ್ಷೀಭೂತನಾಗುವದಂತೂ ದೂರೇ ಉಳಿಯಿತು. ದೀಕ್ಷೆಯನ್ನು ಮಾಡಬೇಕಾದರೆ ಒಬ್ಬ ಆಚಾರ್ಯನು ಗುರುವಾಗಿಯೂ ಉಳಿದ ನಾಲ್ವರು ಆಚಾರ್ಯರು ಸಾಕ್ಷೀಭೂತರಾಗಿಯೂ ಇರತಕ್ಕದ್ದೆಂದೂ, ಈ ಪ್ರಕಾರವಾಗಿಯೇ ದೀಕ್ಷೆಯನ್ನು ಮಾಡತಕ್ಕದ್ದೆಂದೂ ಸುಪ್ರಭೋಧಾಗಮವು ಘಂಟಾಘೋಷವಾಗಿ ಸಾರುತ್ತದೆ, ಇಂಥ ನಾಲ್ವರು ಜಗದಾಚಾರ್ಯರು ಸಾಕ್ಷೀಭೂತರಾಗಿರುತ್ತಿರಲಿಕ್ಕೆ ಒಬ್ಬ ಸೊಟ್ಟ ವಿರಕ್ತನು ಸಾಕ್ಷೀಭೂತನಾಗಲಿಕ್ಕೆ ಸಂಬಂಧವೇನು? ಸುಪ್ರಬೋಧಾಗಮಾಂತರ್ಗತ ಪಂಚಾಚಾರ್ಯ ಪಂಚಮೋತ್ಪತ್ತಿ ಪ್ರಕರಣವನ್ನು ನೋಡು! “ಗುರು [illegible] ಭೂತ ಸಾಕ್ಷಿಣಃ [illegible] ಕಲಶಸ್ಥಕಃ”

ಎಂದು ಪಾರ್ವತಿಯು ಪ್ರಶ್ನೆಮಾಡಿದ್ದಕ್ಕೆ– ಶಿಷ್ಯನ ಗೋತ್ರಾನುಸಾರವಾಗಿ ಆ– ಆ– ಗೋತ್ರಾಧಿಪತಿಗಳಾದ ಆಚಾರ್ಯರೇ ಗುರುಗಳಾಗುವರೆಂದೂ; ಉಳಿದ ನಾಲ್ವರು ಆಚಾರ್ಯರು ಸಾಕ್ಷೀಭೂತರಾಗುವರೆಂದೂ ಪರಮಾತ್ಮನು ಉತ್ತರವನ್ನು ಕೊಟ್ಟಿರುವನು. ಈ ವಿಷಯವನ್ನು ಚನ್ನಾಗಿ ತಿಳಿದುಕೊಂಡು ಭ್ರಾಂತಿಯಿಂದ ದೂರನಾಗು! "ಭೂರುದ್ರಾ ಜಂಗಮಾ ಲೋಕೇ ರೇಜಿರೇ ರೇಣುಕಾದಯಃ" ಎಂಬ ವೀರಮಾಹೇಶ್ವರ ತಂತ್ರೋಕ್ತಿಯಂತೆ ಜಂಗಮ ಪದವಾಚ್ಯರಾದ ಶ್ರೀರೇಣುಕಾದಿ ಜಗದಾಚಾರ್ಯರೇ ಸಾಕ್ಷೀಭೂತರಾಗುವರಲ್ಲದೆ ವಿರಕ್ತನು ಎಂದೂ ಆಗಲರಿಯನು! ನೀನು ಕೊಟ್ಟಿರುವ ಶ್ಲೋಕಗಳು ಇದೇ ತತ್ವವನ್ನು ಬೋಧಿಸುತ್ತವೆಂದು ತಿಳಿ. ಹಾಗೂ ನಿನ್ನ ಅಭಿಪ್ರಾಯಾನುಸಾರವಾಗಿ ವೀರಶೈವ ಮತದಲ್ಲಿ ಅನಾದಿಕಾಲದಿಂದ ಪದ್ಧತಿಯೂ ಕೂಡ ಇಲ್ಲದ್ದರಿಂದ ನಿನ್ನ ಅಭಿಪ್ರಾಯವು ಕೇವಲ ತುಚ್ಛವಾದದ್ದಿರುತ್ತದೆ. ಏಣಾದಿನಾಥ– ಸೇದಿರಾಜ ಮೊದಲಾದವರು ಗುರುಸ್ಥಲದ ಜಂಗಮ ಭಕ್ತರಲ್ಲದೆ ನಿನ್ನ ಅಭಿಪ್ರಾಯದಂತೆ ವಿರಕ್ತರ ಭಕ್ತರಲ್ಲವೆಂದು ಚನ್ನಾಗಿ ಭಾವಿಸು!

(೧೮೭–ಉ–ವಿ.) "ಎನ್ನಂಗದಾಹಾರಸ್ತ್ರೀಯನು ಜಂಗಮಕ್ಕೆ ಸಂಯೋಗವ ಮಾಡಿಸದೆ ನಾನು ಸ್ತ್ರೀಯ ಸಂಯೋಗವ ಮಾಡಿದರೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ" ಈಪ್ರಕಾರವಾಗಿ ಅಂದುಕೊಂಡಿರುವ ಗೊಗ್ಗಯ್ಯನವಚನದಿಂದಲೂ ಹಾಗೂ "ನಾನು ಪುರುಷ ಸಂಯೋಗವ ಮಾಡುವದಕ್ಕೆ ಮುನ್ನವೆ ಜಂಗಮಕ್ಕೆ ಅಂಗಸಂಯೋಗವ ಮಾಡಿಸುವೆ" ಎಂದು ಅಂದುಕೊಂಡಿರುವ ಅಕ್ಕ ಮಹಾದೇವಿಯ ವಚನದಿಂದಲೂ ವಚನಗಳಲ್ಲಿ ಜಂಗಮರೆಂದು ಹೇಳಿಸಿಕೊಳ್ಳುವ ಅಲ್ಲಮನ ಸಾಂಪ್ರದಾಯದ ವಿರಕ್ತರಿಗೆ ಮೊದಲು ತಮ್ಮ ತಮ್ಮ ಸ್ತ್ರೀಯರನ್ನು ಅರ್ಪಿಸತಕ್ಕದ್ದೆಂದು ತೋರುತ್ತದೆ. ಇದು ಕೇವಲ ಅನ್ಯಾಯವಲ್ಲವೇ ಹೇಗೆ? ಎಂದು ಪ್ರಶ್ನೆ ಮಾಡಿದ್ದಕ್ಕೆ– "ಆತ್ಮಾನಂವಾಸುತಾನ್ವಾಪಿ" ಇತ್ಯಾದಿ ಶ್ಲೋಕಗಳನ್ನು ಉದಾಹರಿಸಿ ಆ ವಚನಗಳ ಅಭಿಪ್ರಾಯವೂ ಹಾಗೂ ಈ ಶ್ಲೋಕಗಳ ಅಭಿಪ್ರಾಯವೂ ಒಂದೇ ಇರುವದೆಂದು ಸಮರ್ಥನ ಮಾಡಿರುವಿ. ನೀನು ಸಮರ್ಥನ ಮಾಡಿರುವ ವಿಷಯವು ಆ ವಚನಗಳಿಗೆ ಸಂಬಂಧ ಪಡುವದಿಲ್ಲ! ಯಾಕಂದರೆ– ಅವರು ತಮ್ಮ ವಚನದಲ್ಲಿ ಸೊಗಸಾಗಿ "ಪುರುಷ ಸಂಯೋಗವ ಮಾಡುವದಕ್ಕೆ ಮುನ್ನವೇ" ಎಂದು ಆಡಿ ತೋರಿಸಿದ್ದಾರೆ. ಇನ್ನೊಂದು ವಿಶೇಷವೇನಂದರೆ– ಬಸವನ ಕಾಲದಲ್ಲಿ ಅವನಿಗೂ ಅವನ ಪಂಥಾನುಯಾಯಿಗಳಿಗೂ ಜಾರಕೃತಿಯ ಬಗ್ಗೆ ನಿಷಿದ್ಧವಿದ್ದಿಲ್ಲವೆಂದು ತಿಳಿದು ಬರುತ್ತದೆ. ಬಸವ ಪುರಾಣದ ೧೧ ನೆಯ ಅಧ್ಯಾಯದಲ್ಲಿ– "ಭಕ್ತದ್ವಾದಶ ಸಾಹಸ್ರಂ ಕಲ್ಯಾಣ ನಗರೇ ಶುಭೇ। ನ್ಯವಸದ್ಗಣಿಕಾ ಗೇಹೇಷ್ವನ್ಯಕಾರ್ಯ ವಿವರ್ಜಿತಂ॥ ಕಾಮತಂತ್ರ ವಿಧಾನಜ್ಞಂ ಸುರತಾಸಕ್ತಮಾನಸಂ। ಅನ್ನಪಾನಾದಿಕಂ ಸರ್ವಂ ಬಸವೇಶೋನ

ವಾಸ್ಯಾಂತಿ ॥ ಪ್ರೇಷಯಾ ಮಾಸಸಧ್ವಕ್ಷ್ಯಾ ವೇಶ್ಯಾಗಾರಾಣಿ ಸರ್ವದಾ ॥ ಈ ಪ್ರಕಾರ ವಾಗಿ ಅನ್ಯಕಾರ್ಯಗಳನ್ನೆಲ್ಲ ಬಿಟ್ಟು ಯಾವಾಗಲೂ ಕೇವಲ ಗಣಿಕಾಸ್ತ್ರೀಯರ ಮನೆಗಳಲ್ಲಿಯೇ ಕ್ರೀಡಾಸಕ್ತರಾಗಿ ವಾಸಮಾಡಿಕೊಂಡಂಥ, ಕಾಮಶಾಸ್ತ್ರ ವಿಶಾರದರಾದಂಥ ೧೨ ಸಾವಿರ ವಿಟಜಂಗಮರಿಗೆ ಬಸವನು ಅವರಿದ್ದ ಸ್ಥಾನದಲ್ಲಿಯೇ ಉಣ್ಣಲಿಕ್ಕೆ ಭಕ್ತಿಯಿಂದ ಅನ್ನವನ್ನು ಕಳುಹಿಸಿ ಕೊಡುತ್ತಿದ್ದನೆಂದು ಬರೆದಿರುತ್ತದೆ. ಇದರ ಮೇಲಿಂದ ನೋಡುತ್ತಿರಲಿಕ್ಕೆ ಆಗಿನ ಕಾಲದ ಬಸವಾದಿಗಳು ವ್ಯಭಿಚಾರವನ್ನು ಕೆಟ್ಟದ್ದೆಂಬು ತಿಳಿಯುತ್ತಿದ್ದಿಲ್ಲವೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಅದೇ ಕಾಲದಲ್ಲಿದ್ದ ಬಸವನ ಮಾರ್ಗಾವಲಂಬಿಗಳಾದ ಗೊಗ್ಗಯ್ಯನಾಗಲಿ ಅಥವಾ ಅಕ್ಕ ಮಹಾದೇವಿಯಾಗಲಿ ಆಕೃತಿಯಲ್ಲಿ ದೋಷವನ್ನೆಣಿಸದೆ ತಮ್ಮ ವಚನದಲ್ಲಿ ಆರೀತಿಯಾಗಿ ಅಂದುಕೊಂಡಿರಬಹುದೆಂದು ತೋರುತ್ತದೆ. ಆಗಿನ ಕಾಲದ ಕೃತಿಯು ಈ ಕಾಲದಲ್ಲಿ ವಿರೋಧವಾಗುವದರಿಂದ ನೀನು ಹೀಗೆ ಸಾಧಿಸಿರಬಹುದಲ್ಲವೇ? ಇದ್ದದ್ದನ್ನು ಇದ್ದಂತೆ ಹೇಳಬೇಕು. ಇದರಲ್ಲಿ ದುರಭಿಮಾನವೇಕೆ? ಆದಕಾರಣ ಆ ವಚನಗಳಿಗೂ ನೀನು ಕೊಟ್ಟಿರುವ ಶ್ಲೋಕಗಳಿಗೂ ಸಂಬಂಧವಾಗುವದಿಲ್ಲವೆಂದು ತಿಳಿದು ನಿರ್ಮಲ ಮನಸ್ಸಿನಿಂದ ವಿಚಾರ ಮಾಡಿ ಧನ್ಯನಾಗು!

---

ಇಲ್ಲಿಯವರೆಗೆ ನೀನು ಬರೆದ ಯಾವತ್ತು ಉತ್ತರಗಳನ್ನು ವಿಚಾರಿಸಲಾಗಿ ಅವುಗಳಲ್ಲಿ ಕೇವಲ ದುರಭಿಮಾನವೂ ಹಾಗೂ ಹಠವೂ ತೋರಿಬರುವದಲ್ಲದೆ ನಿಷ್ಪಕ್ಷಪಾತವು ಎಳ್ಳಷ್ಟಾದರೂ ಕಂಡುಬರುವದಿಲ್ಲ; ಹೀಗೆ ಪಕ್ಷಪಾತದಿಂದ ಹಠವನ್ನು ಸಾಧಿಸುವದು ಬುದ್ಧಿವಂತರ ಲಕ್ಷಣವಲ್ಲ! ಆದ್ದರಿಂದ ನಿನ್ನ ಉತ್ತರಗಳ ಮೇಲೆ ವಿಮರ್ಶೆ ಮಾಡಿದ ಯಾವತ್ತು ವಿಷಯಗಳನ್ನು ಚನ್ನಾಗಿ ತಿಳಿದುಕೊಂಡು ಜಾತಿಸಂಕರಕಾರಕರಾದ ಬಸವಾದಿಗಳ ಸಂಬಂಧವನ್ನು ದೂರೀಕರಿಸಿ ಅನಾದಿಸಂಸಿದ್ಧ ಗುರುಗಳಾದ ಶ್ರೀಜಗದ್ಗುರು ರೇಣುಕಾದಿ ಪಂಚಾಚಾರ್ಯರಲ್ಲಿ ಅಕೃತ್ರಿಮವಾದ ಭಕ್ತಿಯನ್ನಿಟ್ಟು ಆ ಭಗವತ್ಪಾದರ ಕೃಪೆಗೆ ಪಾತ್ರನಾಗಿ ಘೋರವಾದ ಭವಬಂಧನದಿಂದ ಮುಕ್ತನಾಗಿ ಸುಖವನ್ನು ಅನುಭವಿಸಿ ಕೃತಕೃತ್ಯನಾಗು.

**ಯತೋಧರ್ಮಸ್ತತೋಜಯಃ! ಸತ್ಯಮೇವಜಯತೇ !!**

**ಸತ್ಯಂವದ! ಧರ್ಮಂಚರ!**

ಉಜ್ಜಯಿನೀ
ತಾ. ೧೧-೧೧-೧೯೩೬.

ತಮ್ಮ,
ಪಂಡಿತಃ ಶ್ರೀಗುರುಸಿದ್ಧಶಾಸ್ತ್ರೀ.

